ಭಾರತದ ದತ್ತಪುತ್ರಿ

# ಆನಿ ಬೆಸೆಂಟ್

ನಿಶಾಕಾಂತ

ಪ್ರಕಾಶಕರು :

ಸ್ಟ್ಯಾಂಡರ್ಡ್ ಬುಕ್ ಡಿಪೋ

ಅವೆನ್ಯೂ ರೋಡ್ : : ಬೆಂಗಳೂರು-೨

# ಮುನ್ನುಡಿ

"ಡಾಕ್ಟರ್ ಆನಿ ಬೆಸೆಂಟರ ಮಹತ್ತರ ಗುಣಗಳನ್ನು—ಎಂದರೆ, ಅವರ ಸ್ಥೈರ್ಯ, ಸರಳತೆ, ಆತ್ಮಸಂಯಮಾದಿಗಳನ್ನು ಬೆಳೆಸಿಕೊಳ್ಳಿ.........ಅವರು ಜಗತ್ತಿನ ಅತ್ಯುತ್ತಮ ವಾಗ್ಮಿಗಳಲ್ಲೊಬ್ಬರು – ಏಕೆ ಗೊತ್ತೆ ? ತಾವು ಏನನ್ನು ನಂಬಿದ್ದಾರೋ ಅದನ್ನೇ ಅವರು ಆಡುತ್ತಾರೆ ; ಆಡಿದಂತೆ ಮಾಡುತ್ತಾರೆ..... ಅವರ ಅಚಂಚಲ ನಿರ್ಧಾರ, ಸರಳ ಜೀವನಗಳನ್ನು ಅನುಸರಿಸಿರಿ.........ಅವರ ಆ ಅಪ್ರತಿಮ ಮನೋದಾರ್ಢ್ಯ, ಅಜೇಯ ಸಂಕಲ್ಪಶಕ್ತಿಗಳನ್ನು ಗಳಿಸಿಕೊಳ್ಳಿ. ........ಈ ಗುಣಗಳಿಲ್ಲದೆ ನಾವು ಸ್ವರಾಜ್ಯಕ್ಕೆ ಅರ್ಹರಾಗಲಾರೆವು.........ಮೈ ಮರೆತು ಮಲಗಿದ್ದ ಭಾರತವರ್ಷವನ್ನು ಎಚ್ಚರಿಸಿದವರು ಡಾಕ್ಟರ್ ಆನಿ ಬೆಸೆಂಟರು" —ಎಂದೊ ಮ್ಮೆ ಗಾಂಧೀಜಿಯವರು ಆನಿ ಬೆಸೆಂಟರನ್ನು ಶ್ಲಾಘಿಸಿದರು.

"ಮೈ ಮರೆತು ಮಲಗಿದ್ದ" ನಮ್ಮ ನಾಡನ್ನು ಎಚ್ಚರಿಸಿದ ಈ ಆದರ್ಶ ವ್ಯಕ್ತಿಯ ಜೀವನ ವೈಖರಿಯನ್ನು ನಮ್ಮ ಜನ ಅರಿತರೆ ಒಳ್ಳೆಯದಲ್ಲವೆ, ಎನಿಸಿತು ಆಗ........

೧೯೪೭ರಲ್ಲಿ ಅಡ್ಯಾರ್‌ನಲ್ಲಿ ನಡೆದ ಆನಿ ಬೆಸೆಂಟ್‌ರವರ ನೂರನೆಯ ಹುಟ್ಟು ಹಬ್ಬದ ಉತ್ಸವದಲ್ಲಿ ಭಾಗವಹಿಸುವ ಸದವಕಾಶ ನನಗೆ ದೊರೆಯಿತು. ಇದರಿಂದಾಗಿ, ಆನಿ ಬೆಸೆಂಟರೊಡನೆ ಬೆಳೆದು, ಬಾಳಿ, ದುಡಿದವರ ಮುಖ ದಿಂದ ಆ ಮಹಾವ್ಯಕ್ತಿಯ ಬಾಳಕಥೆಯನ್ನೂ ಭವ್ಯ ಸಂದೇಶವನ್ನೂ ಕೇಳುವ ಸುಯೋಗ ಲಭಿಸಿತು ; ಅಡ್ಯಾರಿನ ಗ್ರಂಥ ಭಂಡಾರದಲ್ಲಿ ಕುಳಿತು, ಆಕೆ ರಚಿಸಿದ ಮತ್ತು ಆಕೆಯನ್ನು ಕುರಿತು ಇತರರು ಬರೆದಿದ್ದ ಅನೇಕ ಗ್ರಂಥ ಗಳನ್ನು ಓದಲು ಅವಕಾಶವುಂಟಾಯಿತು........

ಎಂಥ ಜೀವನ ಆನಿ ಬೆಸೆಂಟರದು ! ದಿವಾಕರನಂತೆ ಉಜ್ವಲ, ಚೈತನ್ಯದಾಯಕ ; ಇಂದ್ರಚಾಪದಂತೆ ಸುಂದರ, ಶಾಂತ ; ಹಿಮಾಚಲದಂತೆ ಶುಭ್ರ, ಮಹೋನ್ನತ ; ಮಹಾಸಾಗರದಂತೆ ವಿಶಾಲ, ಕಲ್ಲೋಲಪೂರ್ಣ.

ಈ ಬೃಹದ್ ಜೀವನವನ್ನು "ಕನ್ನಡಿಯಲ್ಲಿ ದಿಗ್ಗಜವನ್ನು ತೋರಿಸಿದ ಹಾಗೆ, ಕಿರಿದಾಗಿ, ಆದರೆ ಎಲ್ಲಾ ಭಾಗಗಳೂ ಇರುವಂತೆ, ಸಂಗ್ರಹಿಸಿ" ಹೇಳಬಲ್ಲ ಸಾಮರ್ಥ್ಯ ನನ್ನಲ್ಲಿಲ್ಲ. ಅಂಥ ಕೃತಹಸ್ತ ನಾನಲ್ಲ. ಬಲ್ಲೆ. ಆದರೂ "ತಮ್ಮ ಮೇಲೆ ಬೀಳುವ ಹೊರೆ, ಹೊಣೆಗಾರಿಕೆಗಳನ್ನು ಭರಿಸುವ ಶಕ್ತಿ ಮಾತ್ರವಲ್ಲ, ದಿಟ್ಟತನದಿಂದ ಭವಿಷ್ಯವನ್ನು ಇದಿರಿಸಿ ನಿಲ್ಲಬಲ್ಲ ಸ್ಥೈರ್ಯ ಕೂಡ ನಮ್ಮ ಬಾಲಕ ಬಾಲಕಿಯರಲ್ಲಿ ಬೆಳೆಯಬೇಕು" ಎಂಬ ಆನಿ ಬೆಸೆಂಟರ ಅಪೇಕ್ಷೆ ಈಡೇರಲು, ಅವರ ಪ್ರಭಾವಪೂರ್ಣ ಜೀವನದ ಪರಿಚಯ ಸಹಾಯಕವಾದೀತೆಂದು ಆಶಿಸಿ ಈ ಪುಟ್ಟ ಪುಸ್ತಕವನ್ನು ಬರೆದಿದ್ದೇನೆ.

ಆ ಆಸೆ ಫಲಿಸಿದಲ್ಲಿ ನಾನು ಧನ್ಯ.

ಈ ಪುಸ್ತಕದ ಕರಡು ಪ್ರತಿಯನ್ನು ಅಮೂಲಾಗ್ರವಾಗಿ ಓದಿ, ಉತ್ತಮ ಸಲಹೆಗಳನ್ನು ಕೊಟ್ಟು ಬಹಳ ಮಟ್ಟಿಗೆ ಸಹಾಯ ಮಾಡಿದ ಶ್ರೀ ಮಾ. ನ. ಚೌಡಪ್ಪನವರಿಗೂ, ಈ ಪುಸ್ತಕವನ್ನು ಪ್ರಕಟಿಸಿದ ಸ್ಟ್ಯಾಂಡರ್ಡ್ ಬುಕ್ ಡಿಪೋ ಮಾಲೀಕರಾದ ಶ್ರೀ. ಹೆಚ್. ಕಮಲನಾಥ್ ಅವರಿಗೂ, ಆದಷ್ಟು ಜಾಗ್ರತೆಯಾಗಿ ಮುದ್ರಿಸಿ ಕೊಟ್ಟ ಈಸ್ಟರ್ನ್ ಪ್ರೆಸ್ ಮಾಲೀಕರಾದ ಶ್ರೀ ಎಂ. ಎಸ್. ಚಿಂತಾಮಣಿಯವರಿಗೂ ನಾನು ಚಿರಋಣಿ.

ಬೆಂಗಳೂರು
ಜುಲೈ 1956

**ನಿಶಾಕಾಂತ**

“ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾಽಮೃತಂಗಮಯ”

# ಆನಿ ಬೆಸೆಂಟ್

## ೧

ಮದರಾಸು ನಗರದಲ್ಲಿ ವಾಸಿಸುವವರಿಗೆ, ದಿನದಿನವೂ ಒಂದು ಆಸೆ ಮೊಳೆಯುತ್ತಲೇ ಇರುತ್ತದೆ—ಆ ನಗರದ ಸೆಕೆ, ಧೂಳು, ಗದ್ದಲಗಳಿಂದ ಸ್ವಲ್ಪ ಹೊತ್ತಾದರೂ ತಪ್ಪಿಸಿಕೊಂಡರೆ ಸಾಕಲ್ಲ ಎಂದು!

ಹೀಗೆ ಆಶಿಸುವವರಿಗೆಂದು ದೇವರು ಕರುಣಿಸಿರುವ ವರ ಮದರಾಸಿನ ಕರಾವಳಿ.

ಮದರಾಸಿನ ಹತ್ತಿರವಿರುವ ಸಮುದ್ರಕರಾವಳಿಯಷ್ಟು ನೇರವಾದ, ಸುಂದರವಾದ ಕರಾವಳಿಯನ್ನು ಬೇರೆಯೆಡೆಯಲ್ಲಿ ಕಾಣುವುದು ಅಪೂರ್ವ ವೆಂದು ಜಗತ್ತಿನ ವಿವಿಧ ಭಾಗಗಳಲ್ಲಿ ಪ್ರವಾಸಮಾಡಿ ಬಂದ ಅನುಭವಿಗಳು ಹೇಳುತ್ತಾರೆ. ಬಿಸಿಲ ಹೊಡೆತ ತಗ್ಗಿದ ಮೇಲೆ ಈ ಮುನ್ನೀರ ತಟದಲ್ಲಿ ತಿರುಗಾಡುವುದೆಂದರೆ ಅದೊಂದು ಅಪೂರ್ವ ಅನುಭವ; ಆದ್ದರಿಂದಲೇ ಪ್ರತಿ ದಿನ ಸಂಜೆ, ಮದರಾಸಿನ ಜನ ಸಾವಿರ ಸಾವಿರ ಸಂಖ್ಯೆಯಲ್ಲಿ ಸಮುದ್ರದ ದಂಡೆಗೆ ಬಂದು ಮರಳ ಮೇಲೆ ಕುಳಿತು, ಚಿರಚಂಚಲವಾದ ಆ ಸುನೀಲ ಕಲ್ಲೋಲಗಳ ಸೊಂಪನ್ನು, ಆಕಾಶದ ಆ ಕೊನೆಯಿಂದ ಮೂಡಿ ತಮ್ಮೆಡೆಗೆ ಓಡಿಬರುತ್ತಿರುವಂತೆ ತೋರುವ ಆ ಪೆರ್ದೆರೆಗಳ ಮರ್ಮರ ಗೀತದ ಇಂಪನ್ನು, ಆ ತರಂಗಗಳ ಮೇಲೆ ಹಾದು ಬರುವ ಸುಳಿಗಾಳಿಯ ತಂಪನ್ನು ಅನುಭವಿಸಿ ಆನಂದಿಸುತ್ತಾರೆ! ತಾವು ದಿನವೆಲ್ಲಾ ನಗರದಲ್ಲಿ 'ಸೆಕೆ' 'ಸದ್ದು' ಎಂದು ನರಳಿದ್ದನ್ನು ಮರೆತು ತಮ್ಮ ಕುಂದಿದ ಚೇತನವನ್ನು ಕುದುರಿಸಿಕೊಳ್ಳುತ್ತಾರೆ. ಆದ್ದರಿಂದಲೇ ಅದನ್ನು ದೇವರು ಮದರಾಸಿನವರಿಗೆ ಕರುಣಿಸಿರುವ ವರ ಎಂದಿದ್ದು. ಈ ವರ ಹಿರಿದಾದದ್ದೆಂಬುದರಲ್ಲಿ ಸಂದೇಹವಿಲ್ಲ. ಆದರೆ, ದೈವ ದತ್ತವಾದ ಈ ವರವನ್ನು ಇನ್ನೂ ಉತ್ತಮಗೊಳಿಸಿಕೊಂಡು, ತನ್ನ ಸುಖ ವನ್ನು ಇನ್ನೂ ಹೆಚ್ಚಿಸಿಕೊಳ್ಳುವ ಪ್ರಯತ್ನವನ್ನು ಮದರಾಸಿನವರು ಮಾಡಿಲ್ಲ

ಎಂಬುದು ಒಂದು ದೊಡ್ಡ ಕೊರತೆ.

ಮದರಾಸು ನಗರವನ್ನು ಬಿಟ್ಟು ದಕ್ಷಿಣವಾಗಿ ಸ್ವಲ್ಪದೂರ ನಡೆದರೆ, ಅಡ್ಯಾರ್ ನದಿ ಸಮುದ್ರದಲ್ಲಿ ಬೆರೆಯುವ ಸಂಗಮ ಸ್ಥಾನದ ಸಮೀಪಕ್ಕೆ ಬರುತ್ತೇವೆ. ನದಿಗೆ ಅಡ್ಡವಾಗಿ ಕಟ್ಟಿರುವ ಸೇತುವೆಯನ್ನು ದಾಟಿ ಹತ್ತು ಹೆಜ್ಜೆಹಾಕಿದರೆ, ಎಡಬದಿಯಲ್ಲಿ ಒಂದು ಉದ್ಯಾನದ ಮಹಾದ್ವಾರ ಕಾಣಿಸುತ್ತದೆ. ಇದೇ ಜಗತ್ಪ್ರಸಿದ್ಧವಾದ ಅಡ್ಯಾರ್ ಉಪವನ; ಬ್ರಹ್ಮಜ್ಞಾನ ಸಮಾಜದ ಅಂತರರಾಷ್ಟ್ರೀಯ ಕಾರ್ಯಾಲಯವಿರುವ ತಾಣ. ಎಂಥ ಸುಂದರ ಉಪವನ ಅದು. ಅದರ ಒಂದು ಮೇರೆ ಅಡ್ಯಾರ್ ನದಿ; ಇನ್ನೊಂದು ಮೇರೆ ಮಹೋದಧಿ. ಇವೆರಡರ ಸಲಿಲ ಬಾಹುಗಳ ಮೇಲೆ ಮಂಡಿಸಿ ಯೋಗ ಸಮಾಧಿಯಲ್ಲಿರುವಂತೆ ಕಾಣುತ್ತದೆ ಈ ಉಪವನ; ಪ್ರಕೃತಿದತ್ತವಾದ ಸೌಂದರ್ಯ ಸೌಲಭ್ಯಗಳನ್ನು ಮಾನವ ತನ್ನ ಧೀಶಕ್ತಿ ದುಡಿಮೆಗಳಿಂದ ಹೇಗೆ ಉತ್ತಮಗೊಳಿಸಿಕೊಳ್ಳಬಹುದೆಂಬುದಕ್ಕೆ ಉದಾಹರಣೆ — ಈ ಉಪವನ. ಒಳಹೊಕ್ಕು ಮುಂದುವರೆದರೆ ಸಾಕು—ನಮ್ಮ ಕಣ್ಣಿಗೆ ಬೀಳುವ ಒಂದೊಂದು ಕಟ್ಟಡ, ಮರ, ಸ್ಮಾರಕ ಒಂದೊಂದು ಸವಿನೆನಪನ್ನು ಕೆಣಕುತ್ತದೆ! ಇದಕ್ಕೆ ಕಾರಣವಿಲ್ಲದಿಲ್ಲ. ಕಾಲು ಶತಮಾನಗಳ ಪರಿಯಂತ ಈ ಕ್ಷೇತ್ರ ಒಂದು ಮಹಾವ್ಯಕ್ತಿಯ ಪ್ರಧಾನ ಕಾರ್ಯ ಕ್ಷೇತ್ರವಾಗಿತ್ತು; ಆ ಕಾರಣದಿಂದಾಗಿ ಲಕ್ಷಾಂತರ ಮಂದಿ ದೇಶ ವಿದೇಶೀಯರ ಯಾತ್ರಾಕ್ಷೇತ್ರವಾಗಿ ಪರಿಣಮಿಸಿತ್ತು. ಮದರಾಸಿಗೆ ಹೋಗಿ ಈ ಅಡ್ಯಾರ್ ಉಪವನವನ್ನು ನೋಡದೆ ಬಂದವ, ಕಾಶಿಗೆ ಹೋಗಿ ಗಂಗಾಸ್ನಾನ ಮಾಡದೆ ಬಂದಂತೆ ಎಂಬ ಭಾವನೆ ಮೂಡಿತ್ತು.

ಹೀಗೆ ಅಡ್ಯಾರನ್ನು ಕ್ಷೇತ್ರವನ್ನಾಗಿಸಿದ ಮಹಾವ್ಯಕ್ತಿ ನಮ್ಮ ಕಣ್ಮರೆಯಾಗಿ, ಇಪ್ಪತ್ತಮೂರು ವರ್ಷಗಳಾಗುತ್ತ ಬಂತು. ಆ ಹಿರಿಯಚೇತನ ಈ ಭುವಿಯಲ್ಲಿ ಎಂಭತ್ತಾರು ವರ್ಷಕಾಲ ಬಾಳಿ, ೧೯೩೩ನೇ ಸೆಪ್ಟಂಬರ್ ೨೦ನೇ ತಾರೀಖು ಮಧ್ಯಾಹ್ನೋತ್ತರ ನಾಲ್ಕುಗಂಟೆಗೆ ನಿರ್ವಾಣ ಹೊಂದಿತು.

ಆಧುನಿಕ ಮಾನವರ ಜೀವಿತಾವಧಿಯ ಪರಿಮಿತಿಯ ದೃಷ್ಟಿಯಿಂದ ಎಂಭತ್ತಾರು ವರ್ಷಗಳ ಬಾಳುವೆ ದೀರ್ಘವಾದುದೆಂದು ಧಾರಾಳವಾಗಿ ಹೇಳಬಹುದು. ಆದರೂ ಅಷ್ಟು ವರ್ಷಕಾಲ ಬಾಳಿದವರು ಎಲ್ಲಾ ದೇಶಗಳಲ್ಲೂ ಹಲವಾರು ಮಂದಿ ದೊರೆತಾರು. ಆದರೆ, ಮಹಾಚೇತನಳಾದ ಆನಿ ಬೆಸೆಂಟ್

ನಂತೆ, ತಮ್ಮ ಜೀವಿತಕಾಲವನ್ನು, ತಮ್ಮ ಬುದ್ಧಿಬಲ, ದೇಹಶಕ್ತಿ, ಧನ ಸಂಪತ್ತಿ ಗಳನ್ನು ಪೂರ್ಣವಾಗಿ ಮಾನವ ವರ್ಗದ ಹಿತಕ್ಕಾಗಿ, ಏಳಿಗೆಗಾಗಿ, ಸುಖ ಸಾಧನೆಗಾಗಿ ವಿನಿಯೋಗಿಸಿದವರನ್ನು ನಾವು ಕಾಣುವುದು ತೀರಾ ವಿರಳ. ಆದ್ದರಿಂದ ಆಕೆ ಪ್ರಾತಃಸ್ಮರಣೀಯಳು.

ಇಡೀ ಜಗತ್ತಿಗೆ, ಮಾನವವರ್ಗಕ್ಕೆ ಆಕೆಯಿಂದಾದ ಸೇವೆಯು ಮಾತು ಹಾಗಿರಲಿ; ಆಕೆ, ನಮ್ಮ ನಾಡಿಗೆ, ನಮ್ಮ ಜನಕ್ಕೆ ಸಲ್ಲಿಸಿರುವ ಸೇವೆ ಅಪೂರ್ವ ವಾದದ್ದು. ಇಂದು ಆಕೆ ನಮ್ಮೊಡನಿಲ್ಲವಾದರೂ, ಆಕೆ ಪ್ರಚುರಗೊಳಿಸಿದ ಭಾವನೆಗಳು, ಆಕೆ ಸ್ಥಾಪಿಸಿದ ಸಂಘ ಸಂಸ್ಥೆಗಳು, ಆಕೆಯ ಪ್ರಭಾವ ಕ್ಕೊಳಗಾದ ಶಕ್ತಿಗಳು ನಮ್ಮ ನಾಡಿನ ಶ್ರೇಯೋಭಿವೃದ್ಧಿಗೆ ಕಾರಣ ವಾಗಿವೆ. ಹೀಗೆ ಆಕೆಯ ಚೇತನ ನಮ್ಮೊಡನಿದೆ; ನಮ್ಮ ಇಂದಿನ ವ್ಯವ ಹಾರಗಳನ್ನು ನಿರ್ದೇಶಿಸುತ್ತಿದೆ. ನಮ್ಮ ಕುಂದು ಕೊರತೆಗಳನ್ನು ಸರಿಪಡಿಸಲು ಶ್ರಮಿಸುತ್ತಿದೆ. ಆದ್ದರಿಂದ ಆಕೆಯ ಜೀವಿತಧ್ಯೇಯ, ಆ ಧ್ಯೇಯ ಸಾಧನೆ ಗಾಗಿ ಆಕೆ ನಡೆಸಿದ ತೀವ್ರವೂ ನಿರಂತರವೂ ಆದ ಹೋರಾಟ, ದೀರ್ಘಕಾಲದ ಪರಿಶ್ರಮ, ನಾನಾ ಜೀವನರಂಗಗಳ ಅನುಭವಗಳಿಂದ ಆಕೆ ರೂಢಿಸಿಕೊಂಡ ಭಾವನೆಗಳು, ನಿರೂಪಿಸಿದ ಕಾರ್ಯಕ್ರಮಗಳು, ಆ ಕಾರ್ಯಕ್ರಮ ಸಾಧನೆಯಲ್ಲಿ ಆಕೆಗೆ ದೊರೆತ ಸೋಲು ಗೆಲುವುಗಳು, ಅವುಗಳ ಪರಿಣಾಮಗಳನ್ನು ನಾವು ಅರಿತುಕೊಳ್ಳುವುದು, ಅವುಗಳಿಂದ ಲಾಭಪಡೆದು ಮುನ್ನಡೆಯುವುದು ನಮ್ಮ ಕರ್ತವ್ಯವಾಗಿದೆ.

# ೨

ಆನಿ ಬೆಸೆಂಟ್ ಭಾರತ ವರ್ಷವೇ ತನ್ನ ತಾಯಿನಾಡೆಂದು ಹೇಳಿಕೊಳ್ಳುತ್ತಿದ್ದುದುಂಟು; ಬೇರೆಬೇರೆ ರಾಷ್ಟ್ರಗಳಲ್ಲಿ ಪ್ರವಾಸಮಾಡಿ ಇಂಡಿಯಾಕ್ಕೆ ಹಿಂದಕ್ಕೆ ಬಂದಾಗಲೆಲ್ಲಾ 'ಅಬ್ಬ ನನ್ನ ತೌರುಮನೆಗೆ ಬಂದೆ' ಎಂದು ಸಂತಸಗೊಂಡಿದ್ದುಂಟು. ಜನ್ಮಾಂತರಗಳಲ್ಲಿ ತಾನು, ಅನೇಕಬಾರಿ ಭರತಖಂಡದಲ್ಲಿ ಆವಿರ್ಭವಿಸಿದ್ದುಂಟೆಂದು ಆಕೆ ಹೇಳಿಕೊಂಡಿದ್ದಾಳಾದರೂ, ಈ ಜನ್ಮದಲ್ಲಿ ಆಕೆ ಹುಟ್ಟಿದ್ದು ಬ್ರಿಟಿಷ್ ಸಾಮ್ರಾಜ್ಯದ ರಾಜಧಾನಿಯಾದ ಲಂಡನ್ ನಗರದಲ್ಲಿ-೧೮೪೭ ನೇ ಅಕ್ಟೋಬರ್ ೧ನೇ ತಾರೀಖು ಸಂಜೆ ಐದು ಗಂಟೆ ಮೂವತ್ತೊಂಭತ್ತು ನಿಮಿಷಕ್ಕೆ. ಅಲ್ಲಿಂದ ನಲವತ್ತಾರು ವರ್ಷಗಳ ಕಾಲ ಇಂಗ್ಲೆಂಡ್ ಆಕೆಯ ಪ್ರಧಾನ ಕಾರ್ಯಕ್ಷೇತ್ರವಾಗಿತ್ತು. ಆಮೇಲೆ ಆಕೆಯ ದೃಷ್ಟಿ ಇಂಡಿಯಾದ ಕಡೆಗೆ ತಿರುಗಿತು. ಅಲ್ಲಿಂದಾಚೆಗೆ ಆಕೆ ತನ್ನ ಸೇವೆಯನ್ನೆಲ್ಲಾ ಇಂಡಿಯಾಕ್ಕಾಗಿ ಮುಡಿಪಿಟ್ಟಳೆಂದು ಹೇಳಬಹುದು. ಈ ಮೂವತ್ತೆಂಟು ವರ್ಷಗಳ ಅವಧಿಯಲ್ಲಿ ಆಕೆ ತನ್ನ ಕಾಲವನ್ನೆಲ್ಲಾ ಪ್ರಧಾನವಾಗಿ ಬ್ರಹ್ಮಜ್ಞಾನ ಸಮಾಜದ ಪ್ರಚಾರಕ್ಕೆ ವಿನಿಯೋಗಿಸಿದಳೆಂದು ಮೇಲು ನೋಟಕ್ಕೆ ತೋರಬಹುದಾದರೂ, ಆ ಚಳವಳಿಯಿಂದ, ರಾಷ್ಟ್ರೀಯ, ಅಂತರ ರಾಷ್ಟ್ರೀಯ ರಂಗಗಳೆರಡರಲ್ಲೂ ಇಂಡಿಯಾದ ಶಕ್ತಿ ಬಳೆಯಿತೆಂಬುದನ್ನು ನಾವು ಮರೆಯುವಂತಿಲ್ಲ. ನಮ್ಮ ನಾಡಿಗೆ ಆಕೆ ಸಲ್ಲಿಸಿರುವ ಸೇವೆ ಮಹತ್ವದ್ದೆಂಬುದರಲ್ಲಿ ಸಂದೇಹವೇ ಇಲ್ಲ. ಈ ಸೇವೆಯ ಸ್ವರೂಪವನ್ನು ತಿಳಿಯಲು ಪ್ರಯತ್ನಿಸುವ ಮೊದಲು ಆ ಸೇವೆಗೆ ಪೀಠಿಕೆಯಂತಿರುವ ಆಕೆಯ ಐರೋಪ್ಯ ಜೀವನ, ಸಾಧನೆಗಳನ್ನು ತಿಳಿಯಬೇಕಾದದ್ದು ಅವಶ್ಯಕ.

ತನ್ನ ಬಾಳಿನ ಈ ಮುಖವನ್ನು ಕುರಿತು ಆಕೆ, "ಆತ್ಮಕಥೆ"ಯನ್ನು ಬರೆದಿದ್ದಾಳೆ. ಅದನ್ನನುಲಕ್ಷ್ಯಿಸಿ ಆಕೆಯ ಐರೋಪ್ಯ ಜೀವನ, ಸಾಧನೆಗಳನ್ನು ವಿವರಿಸಬಹುದಾಗಿದೆ.

ಆನಿ ಬೆಸೆಂಟ್‌ಳ ಹುಟ್ಟು ಹೆಸರು ಆನಿ. ಆಕೆ ರೆವರೆಂಡ್ ಫ್ರಾಂಕ್ ಬೆಸೆಂಟ್ ಎಂಬ ಪಾದ್ರಿಯನ್ನು ಮದುವೆಯಾದ ಮೇಲೆ ಆಕೆಯ ಹೆಸರಿನ

ಜೊತೆಗೆ ಅವಳ ಗಂಡನ ವಂಶದ ಹೆಸರು ಸೇರಿ, ಆಕೆ ಆನಿ ಬೆಸೆಂಟ್ ಆದಳು.

ಆನಿ ಹುಟ್ಟಿದ್ದು 'ವುಡ್' ವಂಶದಲ್ಲಿ, ವಿಲಿಯಂ ಪೇಜ್‌ವುಡ್‌ರವರ ಮಗಳಾಗಿ. ಈತನ ಪೂರ್ವಿಕರು ಬೇಸಾಯಗಾರರಾಗಿದ್ದರು. ಅನಂತರ ಆ ವಂಶದ ಕೆಲವರು ವ್ಯಾಪಾರಕ್ಕಾಗಿ ಪಟ್ಟಣಗಳಲ್ಲಿ ನೆಲೆಸಿದರು. ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಿದರು. ಹೀಗೆ ಆ ವಂಶದ ಹಲವರು ಪಟ್ಟಣಿಗ ರಾದರು. ಅವರಲ್ಲೊಬ್ಬ-ಮ್ಯಾಥ್ಯೂ ವುಡ್-ಲಂಡನ್ ನಗರಾಧ್ಯಕ್ಷ ಪದವಿ ಗೇರಿದ. ಅಲ್ಲಿಂದೀಚೆಗೆ ಇನ್ನೊಬ್ಬಾತ, ಶ್ರೀಮಂತ ಪದವಿಗೇರಿ ಲಾರ್ಡ್ ಹ್ಯಾದರ್‌ಲೇ ಎಂಬ ಹೆಸರು ಪಡೆದು ಇಂಗ್ಲೆಂಡಿನ ಲಾರ್ಡ್ ಛಾನ್ಸಿಲರ್ ಆಗಿ ಪ್ರಖ್ಯಾತನಾದ.

ಇತರ ವುಡ್ ವಂಶಸ್ಥರು ಇವರಿಬ್ಬರಷ್ಟು ಪ್ರಖ್ಯಾತರಾಗಲಿಲ್ಲವಾದರೂ, ತಾವು ತಾವು ಕೈಗೊಂಡ ವೃತ್ತಿಗಳಲ್ಲಿ ತಕ್ಕಮಟ್ಟಿನ ಯಶಸ್ಸನ್ನು ಪಡೆದು ಗಣ್ಯ ರೆನಿಸಿಕೊಂಡಿದ್ದರು.

ವಿಲಿಯಂ ಪೇಜ್ ವುಡ್‌ನ ತಾಯಿ ಐರ್ಲೆಂಡಿನವಳು. ಅದರಿಂದಾಗಿ ಆತ ಐರ್ಲೆಂಡಿನಲ್ಲಿ ಬೆಳೆಯುವ ಸನ್ನಿವೇಶ ಏರ್ಪಟ್ಟಿತು. ಆತನ ವಿದ್ಯಾ ಭ್ಯಾಸವೂ ಅಲ್ಲಿಯೇ ನಡೆಯಿತು. ಆತ ಡಬ್ಲಿನ್‌ನ ಟ್ರನಿಟಿ ಕಾಲೇಜಿನಲ್ಲಿ ಓದಿ ವೈದ್ಯಶಾಸ್ತ್ರದಲ್ಲಿ ಪರಿಣಿತನಾಗಿ ಲಂಡನ್ನಿನಲ್ಲಿ ನೆಲೆಸಿದನು.

ಆದರೆ ಅದೇನು ಕಾರಣವೋ ಆತ ವೈದ್ಯವೃತ್ತಿಯನ್ನವಲಂಬಿಸಲಿಲ್ಲ ; ವ್ಯಾಪಾರಿಯಾದನು. ಹೀಗೆ ಜೀವನೋಪಾಯಕ್ಕಾಗಿ ಬೇರೆಯ ವೃತ್ತಿ ಯನ್ನು ಕೈಗೊಂಡರೂ, ವೈದ್ಯವೃತ್ತಿಯ ಬಗೆಗೆ ಆತ ತನ್ನ ಆಸಕ್ತಿಯನ್ನು ಕಳೆದುಕೊಳ್ಳಲಿಲ್ಲ. ಅನೇಕ ಮಂದಿ ವೈದ್ಯರು ಆತನ ಆಪ್ತ ಸ್ನೇಹಿತರಾಗಿದ್ದರು. ಆತ ಅವರೊಡನೆ ಆಗಿಂದಾಗ್ಯೆ ವೈದ್ಯಶಾಲೆಗೆ ಹೋಗುತ್ತಿದ್ದುದಲ್ಲದೆ, ಅವರು ನಡೆಸುತ್ತಿದ್ದ ಶವವಿಚ್ಛೇದನ ಕಾರ್‍ಯದಲ್ಲಿ ಅವರಿಗೆ ನೆರವಾಗುತ್ತಿದ್ದನು.

ವೈದ್ಯಶಾಸ್ತ್ರದಲ್ಲಿ ಆತನಿಗಿದ್ದ ಈ ವಿಶೇಷ ಆಸಕ್ತಿಯೇ ಆತನ ಸಾವಿಗೆ ಕಾರಣವಾಯಿತು !

ಒಮ್ಮೆ ಆತ, ಉಗ್ರಕ್ಷಯದಿಂದ ಸತ್ತಿದ್ದವನೊಬ್ಬನ ಶರೀರವಿಚ್ಛೇದನ ಮಾಡುತ್ತಿದ್ದಾಗ, ಆತನ ಕೈ ಬೆರಳು ಶವದ ಎದೆಯೆಲುಬಿನ ತುದಿಗೆ ತಾಗಿ ಗಾಯವಾಯಿತು. ಸಾಮಾನ್ಯ ಗಾಯಗಳಿಗೆ ಚಿಕಿತ್ಸೆ ನಡೆಸುವಂತೆ ಅದಕ್ಕೆ

ಚಿಕಿತ್ಸೆ ಮಾಡಿದ್ದೂ ಆಯಿತು. ಆದರೆ ಆ ಗಾಯ ವಾಸಿಯಾಗಲಿಲ್ಲ. ಒಂದೆರಡು ದಿನಗಳೊಳಗಾಗಿ ಅದು ಕೆರಳಿತು. ಬೆರಳು ಊದಿತು. ಅದನ್ನು ಪರೀಕ್ಷಿಸಿದ ಹಿರಿಯ ವೈದ್ಯರೊಬ್ಬರು, ಒಡನೆಯೇ ಆ ಬೆರಳನ್ನು ಕತ್ತರಿಸಿಬಿಡುವುದು ಒಳ್ಳೆಯದೆಂದು ಸೂಚಿಸಿದರು. ಇತರ ವೈದ್ಯರು ಈ ಚಿಕಿತ್ಸೆಯನ್ನು ಹೀಯಾಳಿಸಿದರಾಗಿ, ಮೊದಲು ಈ ಶಸ್ತ್ರ ಚಿಕಿತ್ಸೆಗೆ ಒಪ್ಪಿದ್ದ ವಿಲಿಯಂ ಪೇಜ್ ವುಡ್‌ರವರು, ತಮ್ಮ ಮನಸ್ಸು ಬದಲಾಯಿಸಿ, "ಪ್ರಕೃತಿ ಮಾಡಿದಂತಾಗಲಿ" ಎಂದು ಸುಮ್ಮನಾದರು.

ಇದೇ ಅವರ ಜೀವಕ್ಕೆ ಮುಳುವಾಯಿತು!

೧೮೫೨ ನೇ ಆಗಸ್ಟ್ ತಿಂಗಳಲ್ಲಿ ಒಂದು ದಿನ ಅವರು ಮನೆಗೆ ಹಿಂದಿರುಗುತ್ತಿದ್ದಾಗ ಮಳೆಗೆ ಸಿಕ್ಕಿ ನೆನೆದರು. ಅದೇ ಕಾರಣವಾಗಿ, ಅವರಿಗೆ ಜ್ವರ ಕೆಮ್ಮು ಬಂತು. ಅವರನ್ನು ಪರೀಕ್ಷಿಸಲು ಬಂದ ಪ್ರಖ್ಯಾತ ವೈದ್ಯರು, ವುಡ್‌ರವರು ಉಗ್ರ ಕ್ಷಯದಿಂದ ನರಳುತ್ತಿದ್ದಾರೆಂದೂ, ಐದಾರು ವಾರಗಳಿಗಿಂತ ಹೆಚ್ಚುಕಾಲ ಬದುಕಲಾರರೆಂದೂ ಹೇಳಿಬಿಟ್ಟರು! ಅವರ ನಿರೀಕ್ಷಣೆ ತಪ್ಪಾಗಲಿಲ್ಲ. ಅಕ್ಟೋಬರ್ ೫ ನೇ ತಾರೀಖಿನ ದಿನ ವಿಲಿಯಂ ಪೇಜ್‌ವುಡ್‌ರವರು ಕಣ್ಣುಮುಚ್ಚಿ, ತಮ್ಮ ಹೆಂಡತಿಯನ್ನೂ ಮೂರು ಮಕ್ಕಳನ್ನೂ ಅನಾಥರನ್ನಾಗಿ ಮಾಡಿದರು; ಈ ಮಕ್ಕಳಲ್ಲಿ ಇಬ್ಬರು ಹ್ಯಾರಿ ಮತ್ತು ಆಲ್ಫ್ ಗಂಡುಮಕ್ಕಳು. ಇವರಿಬ್ಬರ ನಡುವೆ ಹುಟ್ಟಿದ ಹುಡುಗಿ ಆನಿ.

ಆನಿಯ ತಾಯಿ ಎಮಿಲಿ ತುಂಬಾ ಧೈರ್ಯವಂತೆಯೆಂದೇ ಹೇಳಬೇಕು. ಏಕೆಂದರೆ ಗಂಡನ ಅನಿರೀಕ್ಷಿತ ಅಕಾಲ ಮರಣದಿಂದ ಆಕೆಗೆ ಅಪಾರ ದುಃಖವುಂಟಾಗಿ, ಎದೆಯೊಡೆದಂತಾಯಿತಾದರೂ, ಆಕೆ ಶೀಘ್ರವಾಗಿ ಆ ಅಪಘಾತದಿಂದ ಚೇತರಿಸಿಕೊಂಡು, ತಂದೆಯ ಸಾವಿನಿಂದ ಮಕ್ಕಳ ಸುಖ, ಭವಿಷ್ಯಗಳಿಗೆ ಕುಂದಾಗದಂತೆ ನೋಡಿಕೊಳ್ಳಬೇಕೆಂಬ ಕರ್ತವ್ಯ ನಿಷ್ಠೆಯಿಂದ ಕಾರ್ಯೋನ್ಮುಖಳಾದಳು!

ಆದರೆ ಇನ್ನೊಂದು ಅಪಘಾತ ಆಕೆಗೆ ಕಾದಿತ್ತು. ಗಂಡಸತ್ತ ಕೆಲವು ತಿಂಗಳುಗಳೊಳಗಾಗಿ, ಅವಳ ಕೊನೆಯ ಮಗು ಆಲ್ಫ್ ಸತ್ತುಹೋದ!

ಈ ದುಃಖವನ್ನೂ ನುಂಗಿಕೊಂಡು ಆಕೆ, ತನ್ನ ಉಳಿದೆರಡು ಮಕ್ಕಳ ಪೋಷಣೆಗೆ ಮನಕೊಟ್ಟಳು.

ವಿಲಿಯಂ ಪೇಜ್‌ವುಡ್ ಬದುಕಿದ್ದ ಕಾಲದಲ್ಲಿ ಆತ ತಕ್ಕಮಟ್ಟಿಗೆ ಸಂಪಾದನೆ ಮಾಡುತ್ತಿದ್ದ. ಅದು ಅವನ ಪುಟ್ಟಸಂಸಾರದ ನಿರ್ವಹಣೆಗೆ ಸಾಕಾಗುತ್ತಿತ್ತು. ಅಷ್ಟೇ. ಹೆಚ್ಚಿನ ಉಳಿತಾಯಕ್ಕೆ ಅವಕಾಶವಿರಲಿಲ್ಲ. ಆದರೂ ಕಾಲಕ್ರಮದಲ್ಲಿ ಹೆಚ್ಚು ಸಂಪಾದನೆ ಮಾಡುವ ಮತ್ತು ತನ್ನ ಮಕ್ಕಳಿಗೆ ಅತ್ಯುತ್ತಮ ವಿದ್ಯಾಭ್ಯಾಸವನ್ನು ಕೊಡಿಸುವ ಆಕಾಂಕ್ಷೆ ಮಾತ್ರ ಆತನಲ್ಲಿ ಬಲು ಬಲವಾಗಿತ್ತು. ಆತ ಸಾಯುವಾಗ, ಬಯಸಿದ್ದಾದರೂ ಏನು? ತನ್ನ ಹೆಂಡತಿಗೆ ಹೇಳಿದ್ದಾದರೂ ಏನು? "ಹೇಗಾದರೂ ಮಾಡಿ, ಹ್ಯಾರಿಗೆ ಉತ್ತಮ ವಿದ್ಯಾಭ್ಯಾಸಕ್ಕೆ ಅವಕಾಶಮಾಡು" ಎಂದು.

ಎಮಿಲಿ, ತನ್ನ ಗಂಡನ ಈ ಕೊನೆಯ ಬಯಕೆಯನ್ನು ಆಜ್ಞೆಯೆಂದೇ ಭಾವಿಸಿದಳು. ತನ್ನ ಗಂಡನಂತೆ ತನ್ನ ಮಗನೂ ಉತ್ತಮ ವಿದ್ವಾಂಸನಾಗ ಬೇಕೆಂದು ಬಯಸಿದಳು.

ಆದರೆ, ಅನಾಥೆಯಾದ ವಿಧವೆ, ಯಾವ ಉಪಪತ್ತಿಯ ಬೆಂಬಲವೂ ಇಲ್ಲದೆ ಲಂಡನ್‌ನಂಥ ಮಹಾನಗರದಲ್ಲಿ ತನ್ನ ಸಂಸಾರವನ್ನು ನಿರ್ವಹಿಸಿ ಕೊಂಡು ಮಗನಿಗೆ ವಿದ್ಯಾಭ್ಯಾಸ ಮಾಡಿಸುವುದೆಂದರೆ ಸಾಧ್ಯವೆ? ಹ್ಯಾರಿಗೆ ಉತ್ತಮ ವಿದ್ಯಾಭ್ಯಾಸ ಕೊಡಿಸುವುದಕ್ಕಾಗಿ ಅವನನ್ನು ಕೇಂಬ್ರಿಡ್ಜ್ ಅಥವಾ ಆಕ್ಸ್‌ಫರ್ಡ್‌ಗೆ ಕಳುಹಿಸಬೇಕು. ತಾನು ಲಂಡನ್ನಿನಲ್ಲಿದ್ದು ಅವನನ್ನು ಅಲ್ಲಿಗೆ ಕಳುಹಿಸುವುದೆಂದರೆ, ಇಬ್ಬಗೆಯ ವೆಚ್ಚ. ತಾನು ಲಂಡನ್ನಿನಲ್ಲಿದ್ದು ಎಷ್ಟು ದುಡಿದರೂ ಈ ಎರಡು ವೆಚ್ಚಗಳನ್ನು ವಹಿಸಲು ಸಾಧ್ಯವಿಲ್ಲ. ಅಲ್ಲದೆ ಆಕ್ಸ್‌ಫರ್ಡ್ ಕೇಂಬ್ರಿಡ್ಜ್‌ಗಳಲ್ಲಿ ವಿದ್ಯಾಭ್ಯಾಸದ ವೆಚ್ಚ ಹೆಚ್ಚು. ಇದೆಲ್ಲ ವನ್ನೂ ಆಲೋಚಿಸಿ, ಎಮಿಲಿ, ಲಂಡನ್ ನಗರವನ್ನು ಬಿಟ್ಟು ಹ್ಯಾರೋಗೆ ಹೋಗಿ ನೆಲೆಸಿ ಅಲ್ಲಿಯ ವಿದ್ಯಾಲಯದಲ್ಲೇ ತನ್ನ ಮಗನನ್ನು ಓದಿಸಬೇಕೆಂದು ನಿರ್ಧರಿಸಿದಳು. ನಿರ್ಧರಿಸಿದ್ದೇ ತಡ, ಕೆಲವು ತಿಂಗಳೊಳಗಾಗಿ ಲಂಡನ್ ನಗರವನ್ನು ಬಿಟ್ಟು ಹ್ಯಾರೋಗೆ ಹೊರಟಳು. ಮುಂದೆ ತಮ್ಮ ಆರ್ಥಿಕ ಸ್ಥಿತಿ ಸುಧಾರಿಸಿದರೆ, ಮಗ ತನ್ನ ಇಷ್ಟ ಬಂದಂತೆ ಆಕ್ಸ್‌ಫರ್ಡ್‌ನಲ್ಲಾಗಲೀ, ಕೇಂಬ್ರಿಡ್ಜಿನಲ್ಲಾಗಲೀ ತನ್ನ ವಿದ್ಯಾಭ್ಯಾಸವನ್ನು ಮುಂದುವರೆಸಲಿ ಎಂಬ ಆಕಾಂಕ್ಷೆ ಕೂಡ ಆಕೆಗಿತ್ತು. ಪ್ರಶಂಸನೀಯವಾದ ಆಕಾಂಕ್ಷೆಯೇ—ಆದರೆ, ಕೈಯಲ್ಲಿ ಕಾಸಿಲ್ಲದೆ, ಬೇರೆ ವಿಧವಾದ ಉಪಪತ್ತಿಯಿಲ್ಲದ ವಿಧವೆಗೆ ಅದು

ಮಹಾ ಸಾಹಸ ಕಾರ್ಯವೆಂದೇ ಹೇಳಬೇಕು.

ಹ್ಯಾರೋಗೆ ಬಂದೊಡನೆಯೇ ಎಮಿಲಿ ಒಂದು ಚಿಲ್ಲರೆ ಅಂಗಡಿಯ ಮೇಲಿದ್ದ ಕೊಟಡಿಯನ್ನು ಬಾಡಿಗೆಗೆ ಹಿಡಿದು ತನ್ನ ಮುಂದಿನ ಪ್ರಯತ್ನಕ್ಕೆ ಕೈ ಹಾಕಿದಳು — ಹ್ಯಾರೋದಲ್ಲಿ ವಿದ್ಯಾಭ್ಯಾಸ ಮಾಡಲು ಬರುವ ಮಕ್ಕಳನ್ನು ತನ್ನ ಮನೆಯಲ್ಲಿ ಹಣ ಕೊಡುವ ಅತಿಥಿಗಳಾಗಿಟ್ಟುಕೊಂಡು, ಅದರಿಂದ ಬರುವ ನಾಲ್ಕು ಕಾಸು ಲಾಭದಲ್ಲಿ ತನ್ನ ಮಗನ ವಿದ್ಯಾಭ್ಯಾಸಕ್ಕೆ ವ್ಯವಸ್ಥೆ ಮಾಡಬೇಕೆಂಬುದು ಆಕೆಯ ಉದ್ದೇಶವಾಗಿತ್ತು. ಸ್ವಲ್ಪ ಪ್ರಯತ್ನಪಟ್ಟ ಮೇಲೆ, ಆಕೆಗೆ ಒಬ್ಬ ವಿದ್ಯಾರ್ಥಿ-ಅತಿಥಿ ಸಿಕ್ಕಿದ. ಅನಂತರ ಅವಳು ಚಿಲ್ಲರೆ ಅಂಗಡಿಯ ಮಹಡಿಯನ್ನು ಬಿಟ್ಟು ಚಿಕ್ಕದೊಂದು ಮನೆಯನ್ನು ಗೊತ್ತು ಮಾಡಿಕೊಂಡು ಅಲ್ಲಿಗೆ ತನ್ನ ನಿವಾಸವನ್ನು ಬದಲಾಯಿಸಿಕೊಂಡಳು.

ಈ ಬದಲಾವಣೆಯಿಂದ ಆಕೆಯ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳಲಿಲ್ಲ. ಒಬ್ಬ ಹುಡುಗ ಕೊಡುವ ಹಣದಿಂದ ಅವನ ಊಟ ವಸತಿಗಳ ವೆಚ್ಚ ಕಳೆದು ಏನು ಲಾಭ ಉಳಿದೀತು ? ಆದರೂ ಹ್ಯಾರಿಯ ಜೊತೆಯಲ್ಲಿ ಓದಲು ಒಬ್ಬ ಜೊತೆಗಾರ ಸಿಕ್ಕಿದಂತಾಯಿತು. ಅದಷ್ಟೇ ಆಕೆಗೆ ದೊರೆತ ಸಮಾಧಾನ.

ಆದರೆ ಹೀಗೇ ಇನ್ನೆಷ್ಟು ದಿನ ಕಾಲಹರಣ ಮಾಡಲಾದೀತು ? ವಿದ್ಯಾರ್ಥಿಗಳ ಊಟ ವಸತಿಗಳಿಗೆ ವ್ಯವಸ್ಥೆ ಮಾಡುವುದರಿಂದ ಬರುವ ಲಾಭ ದಿಂದ ತನ್ನ ಸಂಸಾರವನ್ನು ನಿರ್ವಹಿಸಬೇಕಾದರೆ, ಹೆಚ್ಚು ಮಂದಿ ವಿದ್ಯಾರ್ಥಿ ಗಳು ತನ್ನ ಮನೆಯಲ್ಲಿರುವಂತಾಗಬೇಕು ಎಂಬುದು ಎಮಿಲಿಗೆ ಗೊತ್ತಿತ್ತು. ಎಂದರೆ, ಮೊದಲನೆಯದಾಗಿ, ಅವರ ವಾಸಕ್ಕೆ ಅನುಕೂಲವಾದ ಮನೆ ಬೇಕು. ಅಂಥ ಮನೆ ದೊರೆತರೆ, ವಿದ್ಯಾರ್ಥಿನಿಲಯವನ್ನು ನಡೆಸಲು ಹ್ಯಾರೋ ವಿದ್ಯಾಲಯದ ಪ್ರಧಾನಾಧ್ಯಾಪಕರಾಗಿದ್ದ ಡಾಕ್ಟರ್ ವಾಗ್ಹಾನ್ ರವರಿಂದ ಅನುಮತಿ ಪಡೆಯಬಹುದೆಂಬ ನಂಬಿಕೆ ಆಕೆಗಿತ್ತು. ಏಕೆಂದರೆ ಅವರು ಎಮಿಲಿಯ ದೀನಸ್ಥಿತಿ, ಆಕೆಯ ಆತ್ಮಗೌರವ, ಕರ್ತವ್ಯನಿಷ್ಠೆಗಳನ್ನು ಚೆನ್ನಾಗಿ ಬಲ್ಲವರಾಗಿದ್ದರು. ಆಕಯ ಬಗ್ಗೆ ಅವರಿಗೆ ಗೌರವವಿತ್ತು.

ಒಂದು ವರ್ಷ ಪ್ರಯತ್ನಪಟ್ಟಮೇಲೆ ಅಂಥದೊಂದು ಮನೆ ಎಮಿಲಿಗೆ ದೊರೆಯಿತು. ವಿದ್ಯಾಲಯ ಮತ್ತು ಕ್ರೈಸ್ತ ದೇವಾಲಯಗಳ ನಡುವಿನ ಗುಡ್ಡದ ಮೇಲಿದ್ದ ಆ ದೊಡ್ಡ ಬಂಗಲೆ; ಅದು ಆ ಮೊದಲು ಹ್ಯಾರೋನಗರದ

ಪ್ರಧಾನ ಕ್ರೈಸ್ತ ಪಾದ್ರಿಯ ವಾಸದ ಮನೆಯಾಗಿತ್ತು. ಗುಡ್ಡದ ಮೇಲಿದ್ದ ಆ ಮನೆಯ ಸುತ್ತಲೂ ದೊಡ್ಡ ದೊಡ್ಡ ಮರಗಳಿಂದಲೂ ಹಣ್ಣು ಹೂಗಿಡ ಗಳಿಂದಲೂ ನಿಬಿಡವಾದ ದೊಡ್ಡ ತೋಟವಿತ್ತು. ಗುಡ್ಡದ ಇಳಿಜಾರಿನಲ್ಲಿ ಹರಡಿದ್ದ ಆ ತೋಟ ಮಕ್ಕಳು ಆಡುವುದಕ್ಕೆ, ಕುಳಿತು ಓದುವುದಕ್ಕೆ ತುಂಬಾ ಪ್ರಶಸ್ತವಾಗಿತ್ತು.

ಎಮಿಲಿ ಈ ಮನೆಯನ್ನು ಬಾಡಿಗೆಗೆ ಹಿಡಿದು, ತನ್ನ ವಿದ್ಯಾರ್ಥಿ ನಿಲಯಕ್ಕೆ ಅಂಗೀಕಾರ ಕೊಡಬೇಕೆಂದು ಡಾಕ್ಟರ್ ವಾಗ್ಹಾನ್‌ರವರನ್ನು ಕೇಳಿದಾಗ ಅವರು ಸಂತೋಷದಿಂದ ಸಮ್ಮತಿ ಕೊಟ್ಟಿದ್ದಲ್ಲದೆ, ಕೊನೆಯ ವರೆಗೂ ಆ ನಿಲಯದ ಬಗ್ಗೆ ಆಸಕ್ತಿ ತೋರುತ್ತಿದ್ದರು.

ಆನಿಯ ಎಂಟನೇ ಹುಟ್ಟಿದ ಹಬ್ಬದ ದಿನ ಎಮಿಲಿ ತನ್ನ ಸಂಸಾರವನ್ನು ಈ ಮನೆಗೆ ಬದಲಾಯಿಸಿದಳು. ಸ್ವಭಾವತಃ ಸೌಂದರ್ಯ ಪ್ರೇಮಿಯಾಗಿದ್ದ ಆನಿಗೆ ಈ ಮನೆಯೂ, ಅದರ ಸುತ್ತಮುತ್ತಲಿನ ಮನೋಹರವಾದ ತೋಟವೂ ಅತ್ಯಂತ ಆನಂದವನ್ನುಂಟುಮಾಡಿದುವು. ಅವಳು ಹಗಲಿನ ಬಹು ಭಾಗ ವನ್ನು ಈ ತೋಟದಲ್ಲೇ ಕಳೆಯುತ್ತಿದ್ದಳು. ಅಲ್ಲಿದ್ದ ಒಂದು ದೊಡ್ಡ ಮರವೇ ಅವಳ ಮನೆಯಾಗಿತ್ತು! ಆ ಮರದಡಿಯಲ್ಲಿ ಅವಳು ಓದುವುದಕ್ಕೆ ಮಲಗು ವುದಕ್ಕೆ ಕೂರುವುದಕ್ಕೆ ವ್ಯವಸ್ಥೆ ಮಾಡಿಕೊಂಡಿದ್ದಳು. ತೋಟದಲ್ಲಿ ದೊರೆಯು ತ್ತಿದ್ದ ಹಣ್ಣುಗಳನ್ನು ಶೇಖರಿಸಿ ಇಟ್ಟುಕೊಳ್ಳಲೂ ಅಲ್ಲಿ ಅನುಕೂಲಮಾಡಿ ಕೊಂಡಿದ್ದಳು. ಈ ರಮ್ಯ ಸ್ಥಳದಲ್ಲಿ, ಈ ಸೊಗಸಿನ ಏಕಾಂತದಲ್ಲಿ ಆಕೆ ತನಗೆ ಮೆಚ್ಚಿದ ಪುಸ್ತಕಗಳನ್ನೋದುತ್ತಾ ಕಾಲ ಕಳೆಯುತ್ತಿದ್ದಳು. ತಂದೆ ತೀರಿಹೋದಮೇಲೆ ಒಂದೆರಡು ವರ್ಷಕಾಲ ಪಟ್ಟ ಕಾರ್ಪಣ್ಯ ಕಳೆದು ಹೋಗಿ ಸುಖಜೀವನ ಆರಂಭವಾಯಿತು. ಸುಂದರವಾದ ನೆಲೆಯಲ್ಲಿ ನಿಂದು, ತಾಯಿಯ ಅಖಂಡ ಪ್ರೇಮದ ಹೊನಲಲ್ಲಿ ಮಿಂದು ಆನಿಯ ಚೇತನ ಆನಂದ ಗೊಂಡಿತು, ಅಪೂರ್ವ ಶೋಭೆಯನ್ನು ಪಡೆಯಿತು.

ಆದರೆ ಈ ವಾತಾವರಣದಲ್ಲಿ ಆನಿ ಹೆಚ್ಚುಕಾಲವಿರಲು ಅವಕಾಶ ವಿಲ್ಲದೆ ಹೋಯಿತು. ಏಕೆಂದರೆ, ಆನಿ ಹ್ಯಾರೋನಗರವನ್ನು ಬಿಟ್ಟು ಬೇರೆಡೆಗೆ ಹೋಗಿ ಇರಬೇಕಾದ ಪ್ರಸಂಗವೊದಗಿತು. ಹೊಸಮನೆಗೆ ಬಂದು ಆರು ತಿಂಗಳೊಳಗಾಗುವುದರೊಳಗಾಗಿ ಆನಿ ತನ್ನ ಅಚ್ಚುಮೆಚ್ಚಿನ ತಾಯಿ ಯನ್ನು ಬಿಟ್ಟು ಹೊರಟಳು.

*

೩

ಮಿಸ್ ಮ್ಯಾರಿಯಟ್, ಆಕೆಯ ಹೆಸರೇ ಸೂಚಿಸುವಂತೆ ಅವಿವಾಹಿತ ಸ್ತ್ರೀ. ಆಕೆಯ ಅಣ್ಣ ಕ್ಯಾಪ್ಟನ್ ಮ್ಯಾರಿಯಟ್ ಪ್ರಖ್ಯಾತ ಕಾದಂಬರಿಕಾರ. ಆಕೆಗೆ ತುಂಬಾ ಉಪಪತ್ತಿ ಇತ್ತು; ಅವಳು ತಕ್ಕಮಟ್ಟಿಗೆ ವಿದ್ಯಾಭ್ಯಾಸ ಮಾಡಿದವಳೂ ಆಗಿದ್ದಳು. ತನ್ನ ಅಣ್ಣ ಮತ್ತು ತಾಯಿ ಸಾಯುವವರೆವಿಗೂ ಆಕೆ ಅವರಿಬ್ಬರಿಗೂ ಚೆನ್ನಾಗಿ ಶುಶ್ರೂಷೆ ಮಾಡಿದಳು. ಅನಂತರ, ಸೇವಾದೀಕ್ಷೆಯನ್ನು ಕೈಗೊಂಡಳು.

ಮಕ್ಕಳಿಗೆ ಪಾಠ ಹೇಳುವುದರಲ್ಲಿ ಆಕೆಗೆ ತುಂಬಾ ಆಸಕ್ತಿ. ಆದ್ದರಿಂದ ತುಂಬಾ ಹೆಣ್ಣು ಮಕ್ಕಳಿದ್ದ ತನ್ನ ಸಹೋದರನೊಬ್ಬನ ಸಂಸಾರದಿಂದ, ಎಮ್ಮ ಎಂಬ ಹುಡುಗಿಯನ್ನು ಕರೆದುಕೊಂಡು ಬಂದು ಅವಳ ವಿದ್ಯಾಭ್ಯಾಸದ ಜವಾಬ್ದಾರಿಯನ್ನು ತಾನು ಪೂರ್ಣವಾಗಿ ವಹಿಸಿಕೊಂಡಳು. ಆದರೆ ಒಂದೇ ಹುಡುಗಿಗೆ ಪಾಠ ಹೇಳಿದರೆ, ಮನೆಯಲ್ಲಿ ಒಂದೇ ಹುಡುಗಿಯಿದ್ದರೆ ಅವಳಿಗೆ ಬೇಸರವಾಗಬಹುದೆಂದು ಜೊತೆಯಲ್ಲಿರಲು ಇನ್ನೊಂದು ಹೆಣ್ಣು ಮಗುವಿಗಾಗಿ ಹುಡುಕುತ್ತಿದ್ದಳು. ಆಕೆ ಹ್ಯಾರೋಗೆ ಬಂದಿದ್ದಾಗ ಆನಿ ಅಕಸ್ಮಾತ್ತಾಗಿ ಆಕೆಯ ಕಣ್ಣಿಗೆ ಬಿದ್ದಳು. ಮಿಸ್ ಮ್ಯಾರಿಯಟ್ ಅವಳನ್ನು ನೋಡಿದೊಡನೆಯೇ ಅವಳ ಬಗ್ಗೆ ಅಭಿಮಾನ ತಾಳಿದಳು. ಅವಳನ್ನು ಪ್ರೀತಿಯಿಂದ ಕರೆದು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಮುದ್ದಿಸಿದಳು. ಅನಂತರ ಆನಿಯ ವಂಶಚರಿತ್ರೆ, ಸ್ಥಿತಿಗತಿಗಳನ್ನೆಲ್ಲಾ ವಿಚಾರಿಸಿಕೊಂಡು, ಆಕೆಯ ವಿದ್ಯಾಭ್ಯಾಸದ ಹೊಣೆಯನ್ನು ತಾನು ವಹಿಸಿಕೊಳ್ಳಬೇಕೆಂದು ನಿರ್ಧರಿಸಿದಳು.

ಮಾರನೆಯ ದಿನವೇ ಆಕೆ ಎಮಿಲಿಯ ಮನೆಗೆ ಬಂದು, ತನ್ನ ಅಪೇಕ್ಷೆಯನ್ನು ತಿಳಿಸಿ, ವಿದ್ಯಾಭ್ಯಾಸಕ್ಕಾಗಿ ಆನಿಯನ್ನು ತನ್ನ ಮನೆಗೆ ಕಳುಹಿಸಿಕೊಡಬೇಕೆಂದು ಆಕೆಯನ್ನು ಕೇಳಿಕೊಂಡಳು. ತನ್ನ ಪ್ರೀತಿ ಪಾತ್ರಳಾದ ಮಗಳನ್ನು ಬೇರೆಯೆಡೆಗೆ ಕಳುಹಿಸಿಬಿಡುವುದು ವಿಧವೆ ಎಮಿಲಿಗೆ ಅಸಹನೀಯವಾಯಿತು. ಆದರೆ ಅಂಥ ಪ್ರೀತಿಯೊಂದನ್ನೇ ದೃಷ್ಟಿಯಲ್ಲಿಟ್ಟು ಈ ಸಮಸ್ಯೆಯನ್ನು ನಿರ್ಣಯಿಸುವುದು ತಪ್ಪಾದೀತೆಂದು ಎಮಿಲಿಗೆ ತೋರದೆ ಇರಲಿಲ್ಲ.

ಮೊದಲನೆಯದಾಗಿ ಮಿಸ್ ಮ್ಯಾರಿಯಟ್ ಸಜ್ಜನೆ; ಸುಶಿಕ್ಷಿತಳು, ಸೇವಾ ಭಾವದಿಂದ ಪ್ರೇರೇಪಿತಳಾದವಳು; ತಾನೇ ಮಗುವನ್ನು ಪೋಷಿಸಿ, ಬೆಳೆಸಿ, ಪಾಠಹೇಳಲು ಸಿದ್ಧಳಾಗಿದ್ದವಳು. ಎಷ್ಟು ಹಣ ಕೊಟ್ಟರೆ ತಾನೇ ಇಂಥ ಸತ್ಸಂಗದಲ್ಲಿ, ಪ್ರೇಮಮಯ ವಾತಾವರಣದಲ್ಲಿ, ಮಕ್ಕಳಿಗೆ ವಿದ್ಯಾಭ್ಯಾಸ ದೊರೆತೀತು ? ಎಷ್ಟು ಹಣ ಕೊಟ್ಟರೆ ತಾನೇ, ಮಕ್ಕಳಿಗೆ ಇಂಥ ವಯ್ಯಕ್ತಿಕ ಲಕ್ಷ್ಯ ದೊರೆತೀತು ?

ಇದಲ್ಲದೆ, ಎಮಿಲಿ ನಡೆಸುತ್ತಿದ್ದ ವಿದ್ಯಾರ್ಥಿನಿಲಯದಲ್ಲಿದ್ದ ಮಕ್ಕಳೆಲ್ಲಾ ಗಂಡು ಹುಡುಗರು; ಹೆಣ್ಣುಮಕ್ಕಳೊಬ್ಬರೂ ಅಲ್ಲಿರಲಿಲ್ಲ. ಆದ್ದರಿಂದ, ಆ ಪರಿಸ್ಥಿತಿಯ ಫಲವಾಗಿ ಆನಿ ಗಂಡುಮಕ್ಕಳ ಜೊತೆಯಲ್ಲಿಯೇ ಬೆಳೆಯಬೇಕಾದ ಪ್ರಸಂಗವುಂಟಾಗಿತ್ತು. ಇದರಿಂದಾಗಿ ಆನಿಯ ನಡೆನುಡಿಗಳಲ್ಲಿ ಗಂಡುತನದ ಪ್ರಭಾವ ತೋರಲಾರಂಭವಾಗಿತ್ತು. ಅವಳು ಗಂಡು ಹುಡುಗರ ಜೊತೆ ಸೇರಿಕೊಂಡು ಮರ ಹತ್ತುವುದು, ಕ್ರಿಕೆಟ್ ಆಡುವುದು, ಅವರೊಡನೆ ಸ್ಪರ್ಧೆ ನಡೆಸಿ ಅವರನ್ನು ಸೋಲಿಸುವುದು ಆರಂಭವಾಗಿತ್ತು.

ಈ ಸನ್ನಿವೇಶ ಹೆಣ್ಣು ಮಗುವಿನ ಬೆಳವಣಿಗೆಗೆ ತಕ್ಕದಲ್ಲವೆಂದೂ ಆದ್ದರಿಂದ ಆನಿಯನ್ನು ಹೆಣ್ಣು ಮಕ್ಕಳ ಶಾಲೆಗೆ ಕಳುಹಿಸುವುದು ಅವಶ್ಯಕವೆಂದೂ ಎಮಿಲಿ ಆ ಹೊತ್ತಿಗಾಗಲೇ ಮನಗಂಡಿದ್ದಳು. ಎಂದರೆ, ಇನ್ನಷ್ಟು ವೆಚ್ಚದ ಹೊಣೆ ಹೊರಬೇಕು.

ಈ ವೆಚ್ಚದ ಭಾರವಿಲ್ಲದೆ, ದುಡ್ಡು ಕೊಟ್ಟು ಪಡೆಯುವುದಕ್ಕಿಂತ ಉತ್ತಮವಾದ ವಿದ್ಯಾಭ್ಯಾಸದ ವ್ಯವಸ್ಥೆಯ ಅನುಕೂಲ ತನ್ನ ಮಗಳಿಗೆ ದೊರೆಯುವ ಸಂಭವ ತಾನಾಗಿ ಒದಗಿರುವಾಗ ಅದನ್ನು ನಿರಾಕರಿಸುವುದು ಸರಿಯಲ್ಲವೆಂದು ಎಮಿಲಿಗೆ ತೋರಿತು. ತನ್ನ ಮಗಳನ್ನು ಮಿಸ್ ಮ್ಯಾರಿಯಟ್ಳೊಡನೆ ಕಳುಹಿಸಲು ಒಪ್ಪಿದಳು. ರಜಾಕಾಲದಲ್ಲಿ ಮಾತ್ರ ಆನಿ ತನ್ನ ತಾಯಿಯ ಮನೆಗೆ ಬರಬಹುದೆಂದೂ, ಉಳಿದ ಕಾಲದಲ್ಲಿ ಮಿಸ್ ಮ್ಯಾರಿಯಟ್ಳ ಮನೆಯಲ್ಲಿದ್ದು ಅವಳು ಮಾಡುವ ವ್ಯವಸ್ಥೆಯನ್ನನು ಸರಿಸಿ ವಿದ್ಯಾಭ್ಯಾಸ ಮಾಡಬೇಕೆಂದೂ ತೀರ್ಮಾನವಾಯಿತು.

ಎಂಟು ವರ್ಷದಿಂದ ತಾಯಿಯ ಜೊತೆಯಲ್ಲಿಯೇ ಇದ್ದು, ಎಂದೂ ಅವಳನ್ನು ಬಿಟ್ಟು ಹೋಗದಿದ್ದ ಆನಿ, ಮಿಸ್ ಮ್ಯಾರಿಯಟ್ಳೊಡನೆ ತನ್ನ ಹೊಸಮನೆಗೆ ಹೊರಟಳು.

೪

ಆನಿಯ ಹೊಸಮನೆ, ಡೊರ್‌ಸೆಟ್‌ಷೈರ್‌ನಲ್ಲಿ ಚಾರ್‌ಮತ್‌ಗೆ ಸಮೀಪವಾಗಿದ್ದ "ಫರ್ನ್‌ಹಿಲ್". ವಿಶಾಲವಾದ ಸುಂದರವಾದ ಮನೆ. ಮನೆಯ ಯಜಮಾನಿ ಮಿಸ್ ಮ್ಯಾರಿಯಟ್ ಕೆಲವು ದಿನಗಳೊಳಗಾಗಿ ಆನಿಗೆ 'ಚಿಕ್ಕಮ್ಮ'ನಾದಳು. ಈ ಚಿಕ್ಕಮ್ಮ ಮತ್ತು ಮಗಳ ನಡುವೆ ದಿನ ದಿನಕ್ಕೆ ಪ್ರೀತಿ ಬೆಳೆಯಿತು. ಅವರು ಒಬ್ಬರಿಗೊಬ್ಬರು ಅಚ್ಚುಮೆಚ್ಚಾದರು.

ಮಿಸ್ ಮ್ಯಾರಿಯಟ್ ಬುದ್ಧಿವಂತೆ; ಆಕೆಯ ಜ್ಞಾನತೃಷೆ, ಸೇವಾಕಾಂಕ್ಷೆ, ಕಾರ್ಯಶ್ರದ್ಧೆ, ಧರ್ಮಬುದ್ಧಿ ಇವು ಆನಿಯ ಮನಸ್ಸಿನ ಮೇಲೆ ಪ್ರಬಲ ಪರಿಣಾಮವನ್ನುಂಟುಮಾಡಿದುವು. ಈ ಸತ್ಪರಿಣಾಮದ ಪ್ರಭಾವ ಆನಿಯ ಜೀವನದಲ್ಲೆಲ್ಲಾ ಪಸರಿಸಿರುವುದನ್ನು ನಾವು ಸುಲಭವಾಗಿ ಗುರುತಿಸಬಹುದು.

ಒಳ್ಳೆಯ ವಂಶದಲ್ಲಿ ಹುಟ್ಟಿ ಉತ್ತಮ ವಿದ್ಯಾಭ್ಯಾಸಕ್ಕೆ ಅವಕಾಶವಿಲ್ಲದಿದ್ದ ಮಕ್ಕಳಿಗೆ ತಾನು ವಿದ್ಯಾಭ್ಯಾಸ ಮಾಡಿಸುತ್ತಿದ್ದುದಲ್ಲದೆ, ತಾನು ವಾಸಿಸುತ್ತಿದ್ದ ಪ್ರದೇಶದ ಸುತ್ತಮುತ್ತ ವಾಸಿಸುತ್ತಿದ್ದ ಜನರಿಗೆ ತನ್ನಿಂದಾದ ಸಹಾಯಗಳನ್ನೆಲ್ಲಾ ಮಾಡುತ್ತಿದ್ದುದು ಮಿಸ್ ಮ್ಯಾರಿಯಟ್‌ಳ ಗುಣಗಳಲ್ಲೊಂದಾಗಿತ್ತು. ಅವಳು ಬಡಜನರು ವಾಸಿಸುವಲ್ಲಿಗೆ ಪದೇ ಪದೇ ಹೋಗಿ, ಅವರ ಕಷ್ಟಗಳನ್ನು ನಿವಾರಿಸಲು ಪ್ರಯತ್ನಿಸುತ್ತಿದ್ದಳು. ರೋಗಿಗಳಿಗೆ ಔಷಧೋಪಚಾರಗಳನ್ನು ಒದಗಿಸುತ್ತಿದ್ದಳು. ಕಾಯಿಲೆಯಿಂದೆದ್ದವರಿಗೆ ರುಚಿಕರವೂ ಪುಷ್ಟಿಕರವೂ ಆದ ಆಹಾರವನ್ನು ಕಳುಹಿಸುತ್ತಿದ್ದಳು. ನಿರುದ್ಯೋಗಿಗಳಾಗಿದ್ದವರಿಗೆ ಕೆಲಸ ಕೊಡಿಸಲು ಶ್ರಮಿಸುತ್ತಿದ್ದಳು. ಆದರೆ ದುಡ್ಡನ್ನು ದಾನವಾಗಿ ಕೊಡುವುದರಲ್ಲಿ ಆಕೆಗೆ ನಂಬಿಕೆಯಿರಲಿಲ್ಲ. ಜನ ಆಕೆಯನ್ನು ಪ್ರೀತಿಸುತ್ತಿದ್ದರಾದರೂ, ಆಕೆಯನ್ನು ಕಂಡರೆ ಹೆದರುತ್ತಲೂ ಇದ್ದರು. ಏಕೆಂದರೆ, ಯಾರಾದರೂ ಸರಿ, ಸ್ವಲ್ಪ ಅನ್ಯಾಯವಾಗಿ, ಅಸತ್ಯವಾಗಿ ನಡೆದುಕೊಂಡರೆ ಸಾಕು ಆಕೆ ಅವರನ್ನು ಸುಮ್ಮನೆ ಬಿಡುತ್ತಿರಲಿಲ್ಲ ಆಕೆಯ ಪ್ರೀತಿ, ಕೋಪಗಳೆರಡೂ ಜನರ ಮೇಲೆ ಸತ್ಪರಿಣಾಮವನ್ನುಂಟುಮಾಡುತ್ತಿದ್ದುವು.

ಆಕೆಯ ಧರ್ಮಶ್ರದ್ಧೆ ಅಪಾರವಾದದ್ದು. ಕ್ರೈಸ್ತಧರ್ಮದಲ್ಲಿ ಅಪರಿಮಿತ

ವಾದ ನಂಬಿಕೆ ಆಸಕ್ತಿಗಳಿದ್ದುವು ಆಕೆಗೆ;—ಎಷ್ಟರಮಟ್ಟಿಗೆ ಎಂದರೆ, ಭಾನು ವಾರದ ದಿನ ಮಕ್ಕಳು 'ಬೈಬಲ್' ಅನ್ನು ಬಿಟ್ಟು ಬೇರೆ ಪುಸ್ತಕವನ್ನೋದ ಕೂಡದೆಂದು ಕಟ್ಟು ಮಾಡಿದ್ದಳು! ಮೇಲಿಂದ ಮೇಲೆ ಮಕ್ಕಳಿಗೆ 'ಬೈಬಲ್'ನ ಕಥೆಗಳನ್ನು ಹೇಳುತ್ತಿದ್ದಳು. 'ಬೈಬಲ್'ನ ವಾಕ್ಯಗಳನ್ನು ಅವರಿಗೆ ಬಾಯಿ ಪಾಠ ಮಾಡಿಸುತ್ತಿದ್ದಳು. ಪ್ರಾರ್ಥನಾ ಪದ್ಯಗಳನ್ನು ಹೇಳಿಕೊಡುತ್ತಿದ್ದಳು.

ತನ್ನ ಮನೆಯಲ್ಲಿ, ತನ್ನ ಪೋಷಣೆಯಲ್ಲಿದ್ದ ಮಕ್ಕಳಲ್ಲದೆ, ಇತರ ಮಕ್ಕಳಲ್ಲೂ ಧರ್ಮಶ್ರದ್ಧೆಯನ್ನು ಬೆಳಸಬೇಕೆಂಬ ಆಸೆ ಆಕೆಗಿತ್ತು. ಅದಕ್ಕಾಗಿ ಅವಳು ಭಾನುವಾರದ ಶಾಲೆಯನ್ನು ಆರಂಭಿಸಿದ್ದಳು. ಅಲ್ಲಿ ತಾನು ಧರ್ಮ ಬೋಧೆ ಮಾಡುತ್ತಿದ್ದುದಲ್ಲದೆ, ತನ್ನ ಮನೆಯಲ್ಲಿ ಶಿಕ್ಷಣ ಪಡೆಯುತ್ತಿದ್ದ ಮಕ್ಕಳಿಂದಲೂ ಧರ್ಮಬೋಧೆ ಮಾಡಿಸುತ್ತಿದ್ದಳು. ಅವರು ಆ ಕೆಲಸವನ್ನು ಸರಿಯಾಗಿ ನಿರ್ವಹಿಸಬೇಕೆಂದೂ ಅದಕ್ಕಾಗಿ ಅವರು ಶನಿವಾರದ ದಿವಸ ಮನೆ ಯಲ್ಲಿ ಕುಳಿತು ತಾವು ಭಾನುವಾರ ಹೇಳುವ 'ಪಾಠ'ವನ್ನು ಸಿದ್ಧಮಾಡಿಕೊಳ್ಳ ಬೇಕೆಂದೂ ಆಕೆ ನಿಯಮಿಸಿದ್ದಳು. "ನಮ್ಮ ಪ್ರಭುವಾದ ದೇವರಿಗೆ ನಾವು ಏನನ್ನು ಅರ್ಪಿಸುವೆವೋ ಅದರ ಸಂಗ್ರಹಣಕ್ಕಾಗಿ ನಾವು ಸ್ವಲ್ಪವಾದರೂ ಶ್ರಮಪಟ್ಟಿರಬೇಕು. ಶ್ರಮ ಪಡದೆ ಪಡೆದಿದ್ದು ದೇವರಿಗೆ ಅರ್ಪಿಸಲು ತಕ್ಕ ದ್ದಲ್ಲ" ಎಂದು ಆಕೆ ಮೇಲಿಂದ ಮೇಲೆ ಹೇಳುತ್ತಿದ್ದಳು.

ಧಾರ್ಮಿಕ ವಿಚಾರಗಳಲ್ಲಿ ಆಕೆ ಪೂರ್ವ ಸಂಪ್ರದಾಯಕ್ಕೆ ಕಟ್ಟುಬಿದ್ದವ ಳಾಗಿದ್ದರೂ, ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವ ವಿಚಾರದಲ್ಲಿ ಆಕೆ ಸಂಪ್ರ ದಾಯವನ್ನು ಅತಿಕ್ರಮಿಸಿದ್ದಳೆನ್ನಬಹುದು. ವಿದ್ಯಾಭ್ಯಾಸ ಕ್ರಮ, ಜ್ಞಾನಾ ರ್ಜನೆಯ ವಿಚಾರದಲ್ಲಿ ಮಕ್ಕಳಿಗೆ ಬೇಸರವನ್ನುಂಟುಮಾಡಬಾರದು; ಅವರ ಆಸಕ್ತಿಯನ್ನು ಕೆರಳಿಸುವಂಥದಾಗಿರಬೇಕು ಎಂಬುದು ಮಿಸ್ ಮ್ಯಾರಿಯಟ್‌ಳ ಅಭಿಪ್ರಾಯವಾಗಿತ್ತು. ತನ್ನ ಅಭಿಪ್ರಾಯಗಳನ್ನು ನಿರ್ದಾಕ್ಷಿಣ್ಯವಾಗಿ ಆಚ ರಣೆಗೆ ತರುವ ಮನೋವೃತ್ತಿಯನ್ನು ಪ್ರಬಲವಾಗಿ ಬೆಳೆಸಿಕೊಂಡಿದ್ದ ಆಕೆ, ವಿದ್ಯಾಭ್ಯಾಸ ಕ್ರಮದ ವಿಚಾರವಾಗಿ ತಾನು ರೂಢಿಸಿಕೊಂಡಿದ್ದ ಅಭಿಪ್ರಾಯ ಗಳನ್ನು ತನ್ನ ಮನೆಯಲ್ಲಿ ಆಚರಣೆಗೆ ತಂದಿದ್ದಳು.

ಕಾಗುಣಿತವನ್ನು 'ಉರುಹೊಡೆ'ಯಬೇಕೆಂದು ಆಕೆ ಮಕ್ಕಳನ್ನು ಒತ್ತಾಯ ಮಾಡುತ್ತಿರಲಿಲ್ಲ. ಬಲವಂತವಾಗಿ ವ್ಯಾಕರಣ ಪಾಠವನ್ನು ಹೇಳಿ

ಮಕ್ಕಳಿಗೆ ತಲೆನೋವನ್ನುಂಟುಮಾಡುತ್ತಿರಲಿಲ್ಲ. ಮಕ್ಕಳು ತಿರುಗಾಡಲು ಹೋದಾಗ ತಾವು ಕಂಡುದನ್ನು ಕೇಳಿದುದನ್ನು ಬರೆಯುವಂತೆ ಆಕೆ ಪ್ರೇರೇಪಿಸುತ್ತಿದ್ದಳು. ಅವರು ಬರೆದುದನ್ನು ಗಟ್ಟಿಯಾಗಿ ಓದಿ, ವಾಕ್ಯರಚನೆಯ, ಪದಪ್ರಯೋಗದ ಲೋಪದೋಷಗಳನ್ನೂ ಕಾಗುಣಿತದ ತಪ್ಪುಗಳನ್ನೂ ಎತ್ತಿ ತೋರಿಸಿ ಅದನ್ನು ತಿದ್ದಿ, ತಿದ್ದಿದ ವಾಕ್ಯಗಳನ್ನು ಅವರಿಗೆ ಹೇಳುತ್ತಿದ್ದಳು. ಮಕ್ಕಳು ಬರೆದ ವಾಕ್ಯಗಳಲ್ಲಿ ಅಭಿಪ್ರಾಯಗಳು ಸ್ಪಷ್ಟವಾಗಿ ಮೂಡದೆ ಇದ್ದರೆ, ಆ ಅಂಶವನ್ನು ಮಕ್ಕಳಿಗೆ ತೋರಿಸಿ, ಅವರ ಮನಸ್ಸಿನಲ್ಲಿರುವ ಅಭಿಪ್ರಾಯಗಳನ್ನು ಅವರು ಸ್ಪಷ್ಟವಾಗಿ ವಿವರಿಸಲು ಪ್ರಯತ್ನಪಡುವಂತೆ ಮಾಡುತ್ತಿದ್ದಳು. ಇದರಿಂದಾಗಿ, ಯಾವ ವಿಚಾರವೇ ಆಗಲಿ, ಅದನ್ನು ಕುರಿತು ಸ್ಪಷ್ಟವಾಗಿ ಯೋಚಿಸುವ ಮತ್ತು ತಾನು ಆಲೋಚಿಸಿದ್ದನ್ನು ಸ್ಪಷ್ಟವಾದ ಮಾತುಗಳಲ್ಲಿ ತಿಳಿಸುವ ಉತ್ತಮ ಮನೋವೃತ್ತಿ ತನ್ನಲ್ಲಿ ಬಲಪಟ್ಟಿತೆಂದು ಆನಿಯೇ ಹೇಳಿದ್ದಾಳೆ.

ಆನಿಯ ತಂದೆಗೆ ಸಾಹಿತ್ಯ, ವಿಜ್ಞಾನಗಳೆರಡರಲ್ಲೂ ಸಮಾನವಾದ ಅಭಿರುಚಿಯಿತ್ತು. ಆತ ತನ್ನ ಮನೆಯಲ್ಲಿ ಉತ್ತಮ ಸಾಹಿತ್ಯ ಮತ್ತು ವಿಜ್ಞಾನ ಗ್ರಂಥಗಳನ್ನು ಸಂಗ್ರಹಿಸಿದ್ದನು. ಆದ್ದರಿಂದ, ಆನಿ, ಮಿಸ್ ಮ್ಯಾರಿಯಟ್‌ಳ ಮನೆಗೆ ಬರುವುದಕ್ಕೆ ಮೊದಲೇ ಮಿಲ್ಟನ್ ಕವಿಯ "ಪ್ಯಾರಡೈಸ್ ಲಾಸ್ಟ್" ಗ್ರಂಥವನ್ನೋದಿ ಅರ್ಥಮಾಡಿಕೊಳ್ಳುವಷ್ಟು ಸಾಹಿತ್ಯ ಜ್ಞಾನವನ್ನು ಗಳಿಸಿಕೊಂಡಿದ್ದಳು. ಆಕೆ ಮಿಸ್ ಮ್ಯಾರಿಯಟ್‌ನೊಡಸಿದ್ದ ಎಂಟು ವರ್ಷಗಳ ಅವಧಿಯಲ್ಲಿ ಫ್ರೆಂಚ್, ಜರ್ಮನ್ ಮತ್ತು ಲ್ಯಾಟಿನ್ ಭಾಷೆಗಳನ್ನು ಕಲಿತಳು. ಚರಿತ್ರೆ ಭೂವಿವರಣೆಗಳಲ್ಲಿ ತಕ್ಕಮಟ್ಟಿನ ಪಾಂಡಿತ್ಯವನ್ನು ಗಳಿಸಿಕೊಂಡಳು.

ಇವೆಲ್ಲಕ್ಕಿಂತಲೂ ಹೆಚ್ಚಾಗಿ ಆನಿಯಲ್ಲಿ ಸೇವಾಬುದ್ಧಿ, ಧರ್ಮಶ್ರದ್ಧೆಗಳು ಅಪರಿಮಿತವಾಗಿ ಬೆಳೆದುವು.

ಹುಡುಗಿಯರ ಈ ಪ್ರಾಥಮಿಕ ವಿದ್ಯಾಭ್ಯಾಸ ಮುಗಿದಮೇಲೆ, ಅವರನ್ನು ಕಾಲೇಜು ವಿದ್ಯಾಭ್ಯಾಸಕ್ಕೆ ಕಳುಹಿಸುವ ಉದ್ದೇಶ ಮಿಸ್ ಮ್ಯಾರಿಯಟ್‌ಗೆ ಇದ್ದಂತೆ ಕಾಣುವುದಿಲ್ಲ. ಅವರು ಸುಸಂಸ್ಕೃತ ಗೃಹಿಣಿಯರಾದರೆ ಸಾಕು ಎಂದೆನಿಸಿರಬೇಕು ಆಕೆಗೆ. ಆದ್ದರಿಂದ ಆಕೆ ಈ ದೃಷ್ಟಿಯನ್ನೇ ಪ್ರಧಾನ

ವಾಗಿಟ್ಟುಕೊಂಡು, ಆನಿ ಮತ್ತು ಎಮ್ಮ ಇವರಿಗೆ ವಿದ್ಯಾವ್ಯಾಸಂಗ ಮಾಡಿಸಿದಳೆನ್ನಬಹುದು.

ಆನಿ ಹದಿನಾಲ್ಕು ವರ್ಷ ವಯಸ್ಸಿನವಳಾಗಿದ್ದಾಗ ಮಿಸ್ ಮ್ಯಾರಿಯಟ್ ಅವಳನ್ನೂ ಎಮ್ಮಳನ್ನೂ ಜೊತೆಯಲ್ಲಿ ಕರೆದುಕೊಂಡು, ಜರ್ಮನಿ ಮತ್ತು ಫ್ರಾನ್ಸ್‌ಗಳಲ್ಲಿ ದೀರ್ಘಕಾಲ ಪ್ರವಾಸ ಮಾಡಿದಳು. ಈ ಪ್ರವಾಸ ಕಾಲದಲ್ಲಿ ಆನಿ ತನ್ನ ಜರ್ಮನ್ ಮತ್ತು ಫ್ರೆಂಚ್ ಭಾಷಾಜ್ಞಾನವನ್ನು ತುಂಬಾ ಉತ್ತಮಗೊಳಿಸಿಕೊಂಡಳಲ್ಲದೆ, ಪ್ಯಾರಿಸ್ ಮುಂತಾದೆಡೆಗಳಲ್ಲಿದ್ದ ಚಿತ್ರಶಾಲೆಗಳಿಗೆ ಹೋಗಿ ಯೂರೋಪಿನ ಅತ್ಯುತ್ತಮ ಕಲಾಕೃತಿಗಳನ್ನು ನೋಡಿ ತನ್ನ ಕಲಾಭಿಜ್ಞತೆಯನ್ನೂ ಬೆಳೆಸಿಕೊಂಡಳು. ಜೊತೆಗೆ ತನ್ನ ಸಂಗೀತ ಜ್ಞಾನವನ್ನು ಅಭಿವೃದ್ಧಿಪಡಿಸಿಕೊಂಡಳು.

ಈ ಪ್ರವಾಸ ಮುಗಿಸಿಕೊಂಡು ಇಂಗ್ಲೆಂಡಿಗೆ ಹಿಂದಿರುಗಿದಮೇಲೆ ಕೂಡ ಕೆಲಕಾಲ ಆನಿಯ ವಿದ್ಯಾಭ್ಯಾಸ ಮಿಸ್ ಮ್ಯಾರಿಯಟ್‌ಳ ನೇತೃತ್ವದಲ್ಲಿಯೇ ನಡೆಯಿತು. ಅನಂತರ ಆನಿ ಹದಿನಾರೂವರೆ ವರ್ಷದವಳಾಗಿದ್ದಾಗ, ಅವಳ 'ಚಿಕ್ಕಮ್ಮ' ಅವಳನ್ನು ತಾಯಿಯ ಮನೆಗೆ ಕಳುಹಿಸಿದಳು.

ಹ್ಯಾರೋಗೆ ಹಿಂದಿರುಗಿದ ಮೇಲೆ ಆನಿಯ ವಿದ್ಯಾಭ್ಯಾಸ ನಿಲ್ಲಲಿಲ್ಲ. ಮಿಸ್ ಮ್ಯಾರಿಯಟ್ ಅವಳಲ್ಲಿ ಪ್ರೇರೇಪಿಸಿದ್ದ ವಿದ್ಯಾಕಾಂಕ್ಷೆ ಅವಳನ್ನು ಸುಮ್ಮನಿರಗೊಡಲಿಲ್ಲ. ಅವಕಾಶವಿದ್ದಾಗಲೆಲ್ಲ ಆನಿ ಓದುತ್ತಿದ್ದಳು. ಜೊತೆಗೆ ತನ್ನ ಜರ್ಮನ್ ಭಾಷಾಜ್ಞಾನವನ್ನೂ, ಸಂಗೀತಜ್ಞಾನವನ್ನೂ ಹೆಚ್ಚಿಸಿಕೊಳ್ಳಲು ತಜ್ಞರಿಂದ ಪಾಠ ಹೇಳಿಸಿಕೊಳ್ಳುತ್ತಿದ್ದಳು. ಅನೇಕ ವರ್ಷಗಳ ಅನಂತರ ಮನೆಗೆ ಹಿಂದಿರುಗಿದ ಮಗಳೆಂದು ಎಮಿಲಿ, ಆನಿಯನ್ನು ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. ತನ್ನ ಕಷ್ಟ ಕಾರ್ಪಣ್ಯಗಳೇನೇ ಇರಲಿ, ಆನಿ ಬಯಸಿದುದನ್ನು ಅವಳಿಗೆ ತಂದು ಕೊಡುತ್ತಿದ್ದಳು. ತಾನೇ ಅವಳನ್ನು ಸಿಂಗರಿಸುತ್ತಿದ್ದಳು. ಹೀಗೆ ಎರಡು ಎರಡೂವರೆ ವರ್ಷಗಳನ್ನು ಆನಿ ಸುಖ ಸಂತೋಷಗಳಲ್ಲಿ ಕಳೆದಳು; ಆಕರ್ಷಕವಾಗಿ ಬೆಳೆದಳು; ಅವಳ ಸೌಂದರ್ಯ, ವಿದ್ಯೆ, ವಿನಯಗಳನ್ನು ಮೆಚ್ಚಿದ ತರುಣರಿಬ್ಬರು ಮೂವರು ಎಮಿಲಿಯ ಬಳಿಗೆ ಬಂದು ತಾವು ಆನಿಯನ್ನು ವಿವಾಹಮಾಡಿಕೊಳ್ಳಲು ಬಯಸಿರುವುದಾಗಿ ಸೂಚಿಸಿದರು. ಅವರ ಕಣ್ಣಿಗೆ ಆನಿ ಪ್ರೌಢೆಯಾಗಿ ಕಾಣುತ್ತಿದ್ದ

ಳಾದರೂ ಎಮಿಲಿಗೆ ಅವಳಿನ್ನೂ "ಮಗು"; "ಆನಿ ಇನ್ನೂ ಚಿಕ್ಕವಳು. ಅವಳಿಗೆ ಈಗಲೇ ಮದುವೆ ಮಾಡುವುದಿಲ್ಲ" ಎಂದು ಅವರಿಗೆ ಹೇಳಿಬಿಟ್ಟಳು. ಈ ವಿಚಾರವನ್ನು ಕುರಿತು ಆನಿಗೆ ಒಂದು ಮಾತು ಕೂಡ ಹೇಳಲಿಲ್ಲ. ಆಡುವ ಮಗುವಿಗೇಕೆ ಈ ಮಾತುಗಳ ಗೊಡವೆ ಎಂಬ ಧೋರಣೆಯನ್ನನುಸರಿಸಿ ಸುಮ್ಮನಾದಳು.

ಇತ್ತ ಆನಿಯ ಓದುಗಾರಿಕೆ ಸಾಹಿತ್ಯದಿಂದ ಕ್ರೈಸ್ತ ಧರ್ಮದ ಕಡೆಗೆ ತಿರುಗಿತು. ಕ್ರೈಸ್ತಧರ್ಮದ ಪ್ರಾಚೀನಾಚಾರ್ಯರಾದ ಪೊಲಿಕಾಪ್ ಬಾರ್ನ-ಬಸ್, ಇಗ್ನೇಷಿಯಸ್ ಮುಂತಾದವರ ಪತ್ರಸಾಹಿತ್ಯವನ್ನೂ ಕ್ರಿಸೋ-ಸ್ಟೋತೆಮ್‌ನ ವ್ಯಾಖ್ಯಾನವನ್ನೂ, ಅಗಸ್ಟೈನ್ ಸಾಧುವಿನ "ತಪ್ಪೊಪ್ಪಿಗೆ"ಯನ್ನೂ, ಆಧುನಿಕರಾದ ಪೂಸೆ, ಲಿಡ್ಡನ್, ಕೆಬೆಲ್ ಮುಂತಾದವರ ಗ್ರಂಥಗಳನ್ನೂ ತುಂಬಾ ಆಸಕ್ತಿಯಿಂದ ಓದಿದಳು. ಮಿಸ್ ಮ್ಯಾರಿಯಟ್‌ಳ ಶಿಕ್ಷಣ, ಈ ಧಾರ್ಮಿಕ ಸಾಹಿತ್ಯದ ಅಧ್ಯಯನ, ಆನಿಯ ಸಹಜ ಆಧ್ಯಾತ್ಮಿಕ ಮನೋವೃತ್ತಿ ಈ ಮೂರೂ ಸೇರಿ ಆಕೆಯ ದೃಷ್ಟಿಯನ್ನು ಪೂರ್ಣವಾಗಿ, ಕ್ರೈಸ್ತಧರ್ಮ ಸಂಸ್ಥೆಯ ಕಡೆಗೆ ತಿರುಗಿಸಿದುವು. ತನ್ನ ಜೀವನವನ್ನೆಲ್ಲಾ ಕ್ರಿಸ್ತ ಪ್ರಭುವಿನ ಸೇವೆಗಾಗಿ ಮೀಸಲಾಗಿಡಬೇಕೆಂಬ ನಿರ್ಧಾರವನ್ನು ಆಕೆಯ ಮನಸ್ಸಿನಲ್ಲಿ ಮೂಡಿಸಿದುವು. ಕ್ರಿಸ್ತಸ್ವಾಮಿ ತನ್ನ ಸರ್ವಸ್ವ; ತನ್ನ ಸರ್ವಸ್ವವೂ ಆತನೇ, ಆತನ ಪ್ರೀತಿಗೆ ಪಾತ್ರರಾಗಿದ್ದ ದೀನ ದಲಿತರ ಸೇವೆಗೆ ತಾನು ಮೀಸಲು ಎಂಬ ಭಾವನೆಯನ್ನು ಬೆಳೆಸಿದುವು. ಇಂಥ ಮನೋವೃತ್ತಿಯಿಂದ ಪ್ರಭಾವಿತಳಾದ ಆನಿ ಕ್ಯಾಥೊಲಿಕ್ ಸಂಪ್ರದಾಯದವಳಾಗಿದ್ದರೆ, ಅವಳು ಸನ್ಯಾಸಿನಿ (ನನ್ ಆಗಬಹುದಾಗಿತ್ತು. ಕ್ರಿಸ್ತನನ್ನು ಮನಸಾರೆ ಪ್ರೀತಿಸುವ ಕನ್ಯೆಯೆಂಬ ಮಧುರ ಭಾವವನ್ನು ಮನಸ್ಸಿನಲ್ಲಿ ತುಂಬಿಕೊಂಡು ತನ್ನ ಇಡೀ ಜೀವನವನ್ನು ಕ್ರಿಸ್ತಪ್ರಭುವಿಗೆ ಅರ್ಪಿಸಬಹುದಾಗಿತ್ತು. ಆದರೆ ಆನಿ ಹುಟ್ಟಿದ್ದು 'ಆ್ಯಂಗ್ಲಿಕನ್' ಸಂಪ್ರದಾಯದ ಮನೆತನದಲ್ಲಿ. ಅನೇಕ ವಿಚಾರಗಳಲ್ಲಿ ಕ್ಯಾಥೊಲಿಕ್ ಸಂಪ್ರದಾಯದಿಂದ ಭಿನ್ನತೆಯುಳ್ಳ ಆ್ಯಂಗ್ಲಿಕನ್ ಸಂಪ್ರದಾಯದಲ್ಲಿ ಪಾದ್ರಿಗಳ ಮದುವೆಯಾಗಿ ಗೃಹಸ್ಥರಾಗಿರಲು ಅವಕಾಶವುಂಟು. ಸ್ತ್ರೀಯರು ಸನ್ಯಾಸಿನಿ (ನನ್)ಯರಾಗಲು ಅವಕಾಶವಿಲ್ಲ. ಈ ಅವಕಾಶವಿದ್ದಿದ್ದರೆ ಆನಿ ಇಹ ಸಂಸಾರದ ಚಿಂತೆ ತೊರೆದು ಸನ್ಯಾಸಿನಿಯಾಗುತ್ತಿದ್ದಳೇನೋ? ಅಂತು

ಅವಳು ಹತ್ತೊಂಭತ್ತು ವರ್ಷ ವಯಸ್ಸಿನವಳಾಗಿದ್ದಾಗ, ಅವಳ ಮನಸ್ಸು, ಆ ವಯಸ್ಸಿನ ಇತರ ಹೆಣ್ಣು ಮಕ್ಕಳಂತೆ, ಪ್ರಿಯ, ವಿವಾಹ, ಸುಖ ಸಂಸಾರಗಳ ಕಡೆಗೆ ತಿರುಗದೆ, ಕ್ರಿಸ್ತ, ಸೇವಾದೀಕ್ಷೆ, ಲೋಕಕಲ್ಯಾಣ–ಸಾಧನೆಗಳ ಕಡೆಗೆ ತಿರುಗಿತ್ತು. ಅದು ವ್ಯಕ್ತವಾಗಿ ಐಹಿಕ ಸುಖದಿಂದ ವಿಮುಖವಾಗಿತ್ತೆಂದು ಹೇಳುವುದಕ್ಕಾಗದಿದ್ದರೂ, ಆಮುಷ್ಮಿಕ ಪ್ರಪಂಚದಲ್ಲಿ ಬಹುದೂರ ಮುಂದುವರಿದಿತ್ತು ಎಂಬುದರಲ್ಲಿ ಸಂದೇಹವಿಲ್ಲ.

ತನ್ನ ಬಾಳಿನ ಭವಿಷ್ಯದ ವಿಚಾರವಾಗಿ ಆನಿಯ ಮನಸ್ಸಿನಲ್ಲಿ ಇಂಥ ಪ್ರಬಲ ತುಮುಲ ನಡೆಯುತ್ತಿದ್ದಿತೆಂಬುದರ ಅರಿವು ಕೂಡ ಎಮಿಲಿಗೆ ಇರಲಿಲ್ಲ. ಅವಳ ದೃಷ್ಟಿಯಲ್ಲಿ ಆನಿ ಇನ್ನೂ 'ಮಗು'; 'ಅದಕ್ಕೇನುಗೊತ್ತು?'; 'ಅದಕ್ಕೆ ಗೊತ್ತಾಗಬೇಕಾಗಿರುವುದಾದರೂ ಏನು?' ಎಂಬ ಭಾವನೆ ಬಲವಾಗಿದ್ದಿತಾಗಿ, ಅವಳು ತನ್ನ ಮಗಳ ಮನೋಭಾವವನ್ನಾಗಲೀ, ಅವಳ ಮನಸ್ಸು ಹೃದಯಗಳಲ್ಲಿ ಎದ್ದಿದ್ದ ಬಿರುಗಾಳಿಯ ಸ್ವರೂಪವನ್ನಾಗಲೀ ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಿಲ್ಲ; ತನ್ನ ಮಗಳು ಈ ಬಾಳಿನಲ್ಲಿ ನಡೆಸಬೇಕಾಗಿದ್ದ ಸಂಸಾರ ಜೀವನಕ್ಕೆ ಆಕೆಯ ಮನಸ್ಸನ್ನು ಸಿದ್ಧಗೊಳಿಸಲಿಲ್ಲ. ವಿವಾಹ, ಸಾಂಸಾರಿಕ ಜೀವನಗಳ ಗುರುತರ ಹೊಣೆಗಾರಿಕೆಯ ಸ್ವರೂಪವನ್ನವಳಿಗೆ ತಿಳಿಸಲಿಲ್ಲ. ಹಾಗೆ ತಿಳಿಸಬೇಕಾದದ್ದು ಅವಶ್ಯಕ, ತನ್ನ ಕರ್ತವ್ಯ ಎಂಬುದು ಎಮಿಲಿಗೇ ಗೊತ್ತಿರಲಿಲ್ಲವೋ ಏನೋ!

ಮುಗ್ಧ ಧಾರ್ಮಿಕ ಭಾವನೆಗಳ ಸುತ್ತು ಕೋಟೆಯೊಳಗೆ ಕುಳಿತು, ಲೌಕಿಕದ ಗಂಧವನ್ನೇ ಅರಿಯದೆ ಇದ್ದ ಆನಿಗೆ ೧೮೬೬ನೇ ಮಾರ್ಚಿ ತಿಂಗಳಲ್ಲಿ ಫ್ರಾಂಕ್ ಬೆಸೆಂಟ್‌ರ ಪರಿಚಯವಾಯಿತು. ಆ ತಿಂಗಳ ಕೊನೆಯ ವಾರದಲ್ಲಿ ನಡೆಯಲಿದ್ದ ಈಸ್ಟರ್ ಹಬ್ಬದ ನಿಮಿತ್ತ ಆನಿ, ಲಂಡನ್ ನಗರದ ಕ್ಲಾಫಾಂ ಪ್ರದೇಶದಲ್ಲಿದ್ದ ತನ್ನ ತಾಯಿಯ ತಂಗಿಯ ಮನೆಗೆ ಹೋಗಿದ್ದಳು. ಆಕೆ ಕೂಡ ನಿಷ್ಠಾವಂತ ಕ್ರೈಸ್ತಳು. ಆದ್ದರಿಂದ ಅವರಿಬ್ಬರೂ ಸೇರಿ, ಈಸ್ಟರ್ ಹಬ್ಬಕ್ಕಾಗಿ, ಆ ಪ್ರದೇಶದಲ್ಲಿ ಹೊಸದಾಗಿ ಸ್ಥಾಪಿತವಾಗಿದ್ದ ಚರ್ಚನ್ನು ಅಲಂಕರಿಸಲು ನಿರ್ಧರಿಸಿದರು. ಈ ಸಂದರ್ಭದಲ್ಲೇ ಆಕೆಗೆ ಫ್ರಾಂಕ್ ಬೆಸೆಂಟ್‌ರ ಪರಿಚಯವಾದದ್ದು. ಆತ ಪ್ರಸಿದ್ಧ ಕಾದಂಬರಿಕಾರ ವಾಲ್ಟರ್ ಬೆಸೆಂಟ್‌ರ ಸಹೋದರ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದ ಪದವೀಧರ. ವಿದ್ಯಾಭ್ಯಾಸ ಮುಗಿಸಿದ ಮೇಲೆ ಪಾದ್ರಿಯಾಗಿ ದೀಕ್ಷೆ ಪಡೆದಿದ್ದವನು. ಆತನಿಗೆ ಆನಿಯ ಪರಿಚಯವಾದೊಡನೆ ಆಕೆಯಲ್ಲಿ ಆಸಕ್ತಿಯುಂಟಾಯಿತು. ಆಕೆಯ ವಿದ್ಯಾಭ್ಯಾಸ, ನಡವಳಿಕೆ, ದೈವಭಕ್ತಿ, ಮನೆತನ, ಸೌಂದರ್ಯ ಎಲ್ಲವೂ ಆತನಿಗೆ ಮೆಚ್ಚಿಕೆಯಾಯಿತು. ಆತ ಆಕೆಯನ್ನು ಮದುವೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿಕೊಂಡ.

ಫ್ರಾಂಕ್ ಬೆಸೆಂಟ್ ಹೀಗೆ ನಿರ್ಣಯ ಮಾಡಿಕೊಳ್ಳುತ್ತಿದ್ದಾಗ, ಆನಿಯ ಮನೋಭಾವನೆಯಲ್ಲಿ ತೀವ್ರ ಬದಲಾವಣೆಗಳನ್ನು ಪ್ರಚೋದಿಸಿದ ಘಟನೆಗಳೂ ರೂಪುಗೊಂಡುವು. ಈಸ್ಟರ್ ಹಬ್ಬಕ್ಕೆ ಮುಂಚೆ ಆನಿ, ತುಂಬಾ ಶ್ರದ್ಧೆಯಿಂದ ಬೈಬಲ್ ಅಧ್ಯಯನ ನಡೆಸಿದಾಗ, ಅದರಲ್ಲಿ ಬೇರೆಬೇರೆ ಸಂತರು ವಿವರಿಸುವ ಕ್ರೈಸ್ತನ ಜೀವನದಲ್ಲಿ ಪರಸ್ಪರ ಹೊಂದಾಣಿಕೆಯಿಲ್ಲವೆಂಬುದು ತೋರಿಬಂದಿತು. ಈ ಘಟನೆ ಆಕೆಯ ವಿವೇಚನಾಶಕ್ತಿಯನ್ನು ಚುರುಕುಗೊಳಿಸಿ ಕ್ರೈಸ್ತ ಸಂಪ್ರದಾಯಾದಿಗಳನ್ನು ವಿಮರ್ಶನ ದೃಷ್ಟಿಯಿಂದ ನೋಡುವಂತೆ ಪ್ರೇರೇಪಿಸಿತು. ಈ ವಿಮರ್ಶೆ ಮುಂದುವರೆದಂತೆ ಕ್ರೈಸ್ತ ಮತತತ್ವ, ಸಂಪ್ರದಾಯಗಳಲ್ಲಿ ಆನಿಯ ನಂಬಿಕೆ ಕಡಮೆಯಾಗುತ್ತ ಬಂತು.

ಇದಲ್ಲದೆ, ೧೮೬೭ ರ ಮಧ್ಯ ಭಾಗದಲ್ಲಿ ಆನಿಗೆ ರಾಬರ್ಟ್ಸ್‌ನ ಪರಿಚಯ ವಾಯಿತು, ತನ್ನ ತಾಯಿಯೊಡನೆ ಆಕೆಯ ಸ್ನೇಹಿತರನ್ನು ನೋಡಲು ಹೋಗಿದ್ದಾಗ. ರಾಬರ್ಟ್ಸ್ 'ಬಡವರ ನ್ಯಾಯವಾದಿ' ಎಂದು ಪ್ರಸಿದ್ಧನಾಗಿದ್ದ ವ್ಯಕ್ತಿ. ಗಣಿಗಳಲ್ಲಿ ಹೆಂಗಸರಿಂದ ಕೆಲಸ ತೆಗೆಯುತ್ತಿದ್ದುದನ್ನೂ ಕಾಲಮಿತಿ ಯಿಲ್ಲದೆ ಮಕ್ಕಳಿಂದ ಹಗಲಿರುಳು ದುಡಿಸುತ್ತಿದ್ದುದನ್ನೂ ತಪ್ಪಿಸಲು ತೀವ್ರವಾಗಿ ಹೋರಾಡಿದ ವ್ಯಕ್ತಿ. ಆತನ ವಿಶಾಲಕರುಣೆ, ದೀನದಲಿತರ ಹಿತಸಾಧನೆಗಾಗಿ ಆತ ನಡೆಸಿದ ಕೆಚ್ಚಿನ ಹೋರಾಟಗಳು ಆನಿಯ ಮನಸ್ಸಿಗೆ ತುಂಬಾ ಮೆಚ್ಚಿಗೆ ಯಾದುವು. ಆಕೆಯನ್ನು ಮುಚ್ಚಿದ್ದ ಮುಗ್ಧಧಾರ್ಮಿಕ ಭಾವನೆಯ ಮುಸುಕು ಒಂದೆಡೆ ವಿಮರ್ಶನೆಯ ಮೊನೆಯಿಂದ ಇನ್ನೊಂದೆಡೆ ರಾಜಕೀಯ ಹೋರಾಟದ ಆಕರ್ಷಣೆಯ ಅಲುಗಿನಿಂದ ಛಿದ್ರವಾಯಿತು ! ಚಿಪ್ಪಿನೊಳಗೆ ಅಡಗಿಕೊಂಡಿದ್ದ ಆಮೆಯಂತಿದ್ದ ಆನಿಯ ಮನಸ್ಸು ಹೊರಪ್ರಪಂಚಕ್ಕೆ ತನ್ನ ತಲೆ ಕಾಲುಗಳನ್ನು ನೀಡಿತು. ಸಂಕುಚಿತವಾಗಿದ್ದ ಆಕೆಯ ದೃಷ್ಟಿ ವಿಶಾಲ ಗೊಳ್ಳಲಾರಂಭಿಸಿತು.

ಈ ದೃಷ್ಟಿ ಪೂರ್ಣವಾಗಿ ಬಲಗೊಳ್ಳಲು ತಕ್ಕಷ್ಟು ಅವಕಾಶ ಸಿಕ್ಕಿದ್ದರೆ, ಆನಿ ತನ್ನ ಭವಿಷ್ಯವನ್ನು ರೂಪಿಸಿಕೊಳ್ಳುತ್ತಿದ್ದಳೇನೋ ? ಆದರೆ ಆಕೆಗೆ ಆ ಅವಕಾಶ ದೊರೆಯಲಿಲ್ಲ. ಫ್ರಾಂಕ್ ಬೆಸೆಂಟ್ ಆನಿಯನ್ನು ಕಂಡು ಮೋಹ ಗೊಂಡ ಕೆಲವು ತಿಂಗಳೊಳಗಾಗಿ ಆತ ಆಕೆಯ ತಾಯಿಯನ್ನು ಕಂಡು ಆನಿ ತನ್ನ ವಧುವಾಗಬೇಕೆಂದು ಬೇಡಿದ. ವಿದ್ಯಾವಂತ, ವಿನಯಶಾಲಿ, ಉತ್ತಮ ವಂಶದವನು, ಮೇಲಾಗಿ ಗೌರವನೀಯವಾದ ಪಾದ್ರಿ ವೃತ್ತಿಯಲ್ಲಿರುವವನು; —ತರುಣ ಫ್ರಾಂಕ್ ಬೆಸೆಂಟ್ ತನ್ನ ಮಗಳಿಗೆ ತಕ್ಕ ವರನೆಂದು ತೋರಿತು ಎಮಿಲಿಗೆ ಆಕೆ ಆತನ ಬೇಡಿಕೆಗೆ ಒಪ್ಪಿದಳು. ೧೮೬೭ರನೇ ಅಕ್ಟೋಬರ್ ತಿಂಗಳಲ್ಲಿ ಅವರಿಬ್ಬರ ಮದುವೆಯ ನಿಶ್ಚಿತಾರ್ಥ ನಡೆದೇಹೋಯಿತು.

ಆನಿಗೆ ಬೆಸೆಂಟ್‌ರ ವಿಚಾರವಾಗಿ ಪ್ರೀತಿಯೂ ಇರಲಿಲ್ಲ, ದ್ವೇಷವೂ ಯಿರಲಿಲ್ಲ. ಆತ ವಿದ್ಯಾವಂತ, ಸಜ್ಜನ ಎಂದು ಗೌರವವಿತ್ತು. ಆದ್ದರಿಂದ ಆಕೆ ಆತನೊಡನೆ ಸಲಿಗೆಯಿಂದ ಮಾತನಾಡುತ್ತಿದ್ದಳು. ಆದರೆ ಆತ ಅದನ್ನು ಪ್ರೀತಿಯೆಂದು ಭಾವಿಸಿದನೇನೋ ?........ಆತ ಇದ್ದಕ್ಕಿದ್ದಂತೆ ಒಂದು ದಿನ ತನ್ನನ್ನು ಮದುವೆಯಾಗಲು ಒಪ್ಪುವಂತೆ ಆನಿಯನ್ನು ಪ್ರಾರ್ಥಿಸಿ, "ನಾನು

ನಿನ್ನಲ್ಲಿಟ್ಟಿರುವ ನಂಬಿಕೆ, ನಿರೀಕ್ಷಣೆಗಳನ್ನು ಮಣ್ಣುಗೂಡಿಸಬೇಡ" ಎಂದು ಹೇಳಿ ಹೊರಟು ಹೋದಾಗ ಆನಿಗೆ ದಿಗ್ಭ್ರಾಂತಿಯಾಯಿತು. ಮುಂದೇನು ಮಾಡಬೇಕೆಂಬುದು ತೋರಲಿಲ್ಲ. ಆಗಲೇ ಆತನ ಸೂಚನೆಯನ್ನು ನಿರಾಕರಿಸಿ ಆತನ ಮನಸ್ಸನ್ನೇಕೆ ನೋಯಿಸಬೇಕು, ಮದುವೆಯ ಮಾತು ಬಂದಾಗ ನೋಡಿಕೊಳ್ಳೋಣ ಎಂದು ಆನಿ ಸುಮ್ಮನಾದಳು. ಆದರೆ ಮದುವೆಯ ಮಾತು ಆಕೆಯ ಮುಂದೆ ಬರುವ ಹೊತ್ತಿಗೆ ಮದುವೆ ನಿಶ್ಚಯವಾಗಿಯೇ ಹೋಗಿತ್ತು. ಆಕೆಯ ಮೌನವನ್ನು ಎಲ್ಲರೂ ಸಮ್ಮತಿಯೆಂದೇ ಭಾವಿಸಿ ಬಿಟ್ಟಿದ್ದರು. ಎಮಿಲಿ, ಆನಿಗೆ, 'ನಾನು ಮಾತು ಕೊಟ್ಟಿದ್ದಾಯಿತು ಅದನ್ನು ಮುರಿಯುವಂತಿಲ್ಲ' ಎಂದು ದೃಢವಾಗಿ ಹೇಳಿ, ಆಮೇಲೆ ಆ ಮದುವೆಯಿಂದ ಐಹಿಕ, ಧಾರ್ಮಿಕ ಲಾಭಗಳೆರಡೂ ಉಂಟೆಂದು ಸೂಚಿಸಿ ಮಗಳನ್ನು ಮದುವೆಗೊಪ್ಪಿಸುವ ಪ್ರಯತ್ನಮಾಡಿದಳು. ತನ್ನ ಪ್ರೀತಿ ಪಾತ್ರಳಾದ ತಾಯಿಯ ಮನಸ್ಸಿಗೆ ನೋವನ್ನುಂಟುಮಾಡುವುದಾಗಲೀ, ಅವಳ ಅಪೇಕ್ಷೆಗೆ ವಿರುದ್ಧವಾಗಿ ನಡೆದುಕೊಳ್ಳುವುದಾಗಲೀ ಆನಿಗೆ ಸಾಧ್ಯವೇ ಇರಲಿಲ್ಲ. ಹೀಗೆ ಅವಳು ಪ್ರಬಲವಾದ ಹೊಯ್ದಾಟದಲ್ಲಿ ಸಿಕ್ಕಿ, ಸ್ವಶಕ್ತಿಯನ್ನು ಕಳೆದುಕೊಂಡು ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿ ಅದು ಸೆಳೆದೆಡೆಗೆ ನಡೆದಳು.

ನಿಶ್ಚಿತಾರ್ಥವಾದ ಹದಿನಾಲ್ಕು ತಿಂಗಳುಗಳ ಅನಂತರ, ೧೮೬೭ನೇ ಡಿಸೆಂಬರ್‌ನಲ್ಲಿ ಆನಿ, ರೆವರೆಂಡ್ ಫ್ರಾಂಕ್ ಬೆಸೆಂಟರ ಧರ್ಮಪತ್ನಿಯಾಗಿ, 'ಆನಿ ಬೆಸೆಂಟ್' ಆದಳು.

೬

ಆನಿ, ಎಂಥ ಪರಿಸ್ಥಿತಿಯಲ್ಲಿ ಸಿಕ್ಕಿಕೊಂಡು ರೆವೆರೆಂಡ್ ಫ್ರಾಂಕ್ ಬೆಸೆಂಟ್‌ರನ್ನು ಮದುವೆಯಾದಳೆಂಬುದನ್ನು ಬಲ್ಲವರಿಗೆ, ಅವರಿಬ್ಬರ ದಾಂಪತ್ಯ ಸುಖಮಯವಾಗುವುದು ಅಸಾಧ್ಯವೆಂದು ತೋರಿಯೇ ತೋರುತ್ತದೆ. ಅದು ಆದದ್ದೂ ಹಾಗೆಯೇ. ವಿವಾಹ ತನ್ನನ್ನು ಎಂಥ ಪ್ರಬಲ ಬಲೆಯಲ್ಲಿ ತೊಡಗಿಸಿ ಬಿಡುತ್ತದೆಯೆಂಬುದರ ಅರಿವೇಯಿಲ್ಲದೆ, ಪರಿಸ್ಥಿತಿಯ ಕೈಗೊಂಬೆಯಾಗಿ ಗೃಹಿಣಿಯಾದ ಆನಿ, ದಾಂಪತ್ಯದ ಸೆರೆಯಲ್ಲಿ ನರಳಿದ್ದು, ಕೊನೆಗೆ ಆ ಸೆರೆ ಮನೆಯ ಬಾಗಿಲನ್ನು ಭೇದಿಸಿ ಹೊರಗೆ ಬಂದದ್ದು—ಅದೊಂದು ಕರುಣಾಜನಕ ಸಾಹಸಗಾಥೆ! ಆನಿಯಷ್ಟು ಮನೋದಾರ್ಢ್ಯ, ಸಹಿಷ್ಣುತೆ, ಆತ್ಮನಿಷ್ಠೆಗಳಿಲ್ಲದ ಯಾರಾದರೂ ಆ ಸೆರೆಮನೆಯಲ್ಲಿ ನರಳಿ ಕೊಳೆಯುತ್ತಿದ್ದರೇ ವಿನಾ, ಹೊರಗೆ ಬಂದು ಸ್ವತಂತ್ರರಾಗುತ್ತಿರಲಿಲ್ಲ.

ಆನಿ ಬೆಸೆಂಟ್‌ಳ ಜೀವನದ ಈ ದುರ್ಭರ ಪ್ರಸಂಗವು, ಆಕೆಯ ಅದಮನೀಯ ವ್ಯಕ್ತಿತ್ವದ ಮೇಲ್ಮೆಯನ್ನು ಎತ್ತಿ ತೋರಿಸುತ್ತದೆಯಾಗಿ, ಅದನ್ನು ಕುರಿತು ಕೆಲವು ಮಾತುಗಳನ್ನು ಹೇಳುವುದು ಅವಶ್ಯಕ.

ಫ್ರಾಂಕ್ ಬೆಸೆಂಟ್‌ರನ್ನು ವಿವಾಹವಾಗುವುದಕ್ಕೆ ಸ್ವಲ್ಪ ಕಾಲ ಮುಂಚೆ ಆನಿಯ ಮನಸ್ಸಿನಲ್ಲಿ ಎಂಥ ಕ್ರಾಂತಿಕಾರಕಭಾವನೆಗಳ ತಾಕಲಾಟ ಆರಂಭವಾಗಿತ್ತೆಂಬುದನ್ನು ಈಗಾಗಲೇ ನೋಡಿದ್ದೇವೆ. ಆ ತಾಕಲಾಟ ಬಲವಾದಂತೆ, ಆಕೆಯ ವಿಮರ್ಶನಬುದ್ಧಿ ಬೆಳೆದಂತೆ, ಆಕೆಯ ಸಂಸಾರಜೀವನ ಹೆಚ್ಚು ಹೆಚ್ಚು ವಿಷಮವಾಗುತ್ತಾ ಬಂತು. ಇದಕ್ಕೆ ಆಕೆಯೂ ಕಾರಣಳಲ್ಲ. ಆಕೆಯ ಗಂಡನೂ ಕಾರಣನಲ್ಲ. ಒಬ್ಬರ ಮನೋವೃತ್ತಿ ಒಬ್ಬರಿಗೆ ತಿಳಿಯದೆ ಪರಸ್ಪರ ವಿರುದ್ಧಭಾವನೆಗಳನ್ನುಳ್ಳವರು ಗಂಡಹೆಂಡಿರಾದುದರ ದುಷ್ಫಲ. ಆದ್ದರಿಂದ ಈ ದಾಂಪತ್ಯದಲ್ಲಿ ಮೂಡಿದ ವಿರಸಕ್ಕಾಗಿ ಅವರು ಯಾರನ್ನೂ ನಿಂದಿಸಿ ಫಲವಿಲ್ಲ. ಅವರಿಬ್ಬರೂ ಸಿಕ್ಕಿಬಿದ್ದ ಪರಿಸ್ಥಿತಿಯಲ್ಲಿ ಅವರ ದಾಂಪತ್ಯ ಸಾಮರಸ್ಯ ಭಂಗವಾದದ್ದು ಅನಿವಾರ್ಯವೆಂದೇ ತೋರುತ್ತದೆ.

ಫ್ರಾಂಕ್ ಬೆಸೆಂಟರು ಪಾದ್ರಿಯಾಗಿ ದೀಕ್ಷೆ ಪಡೆದಿದ್ದವರು. ಆದ್ದರಿಂದ

ಅವರ ಪಂಥವಾದ ಆ್ಯಂಗ್ಲಿಕನ್ ಚರ್ಚಿನ ನಂಬಿಕೆ, ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುವುದು ಅವರ ಕರ್ತವ್ಯವಾಗಿತ್ತು.

ಆದರೆ ಅವರನ್ನು ಮದುವೆಯಾಗುವ ಹೊತ್ತಿಗೆ ಆನಿಯ ಮನಸ್ಸಿನಲ್ಲಿ ಕ್ರೈಸ್ತಮತ ತತ್ವಗಳ ವಿಚಾರವಾಗಿ ನಾನಾ ಸಂದೇಹಗಳು ಹುಟ್ಟಿಕೊಂಡಿದ್ದುವು. ಏಸುಕ್ರಿಸ್ತನ ಬಗ್ಗೆ ಅವಳಿಗಿದ್ದ ಅಪಾರ ಭಕ್ತಿ, ವಿಶ್ವಾಸ, ಪ್ರೇಮಗಳಿಂದಾಗಿ ಅವಳು ತಾತ್ಕಾಲಿಕವಾಗಿ ಆ ಸಂದೇಹಗಳನ್ನು ತನ್ನ ಮನಸ್ಸಿನ ಹಿಂಬದಿಗೆ ತಳ್ಳುವುದು ಸಾಧ್ಯವಾಗಿತ್ತು. ಅವಳ ಈ ಮಾನಸಿಕ ದಬ್ಬಾಳಿಕೆ ಅವಳಿಗೆ ತಾತ್ಕಾಲಿಕವಾದ ಮನಶ್ಶಾಂತಿಯನ್ನು ತಂದಿತಾದರೂ, ಹೆಚ್ಚು ತೀವ್ರತೆಯಿಂದ ಮುನ್ನುಗ್ಗಿ ಬಂದು ಅವಳ ಮನಶ್ಶಾಂತಿಯನ್ನು ಭಂಗಪಡಿಸಲು ಆ ಸಂದೇಹಗಳು ಹೊಂಚು ಹಾಕುತ್ತಲೇ ಇದ್ದುವು.

ಅಂಥ ಸಂದರ್ಭ ಕೂಡಿಬರಲು ಹೆಚ್ಚುಕಾಲ ಬೇಕಾಗಲಿಲ್ಲ.

ಮದುವೆಯಾದ ಮೇಲೆ ತನ್ನ ಗಂಡನೊಡನೆ ಹೊಂದಿಕೊಂಡಿರಲು ಆನಿ ಪ್ರಯತ್ನ ಮಾಡಿದಳು. ತನ್ನ ಸಂಸಾರದ ಕೆಲಸಗಳನ್ನು ಕ್ರಮವಾಗಿ ನಿರ್ವಹಿಸುತ್ತಾ ಅವಕಾಶವಿದ್ದಾಗಲೆಲ್ಲಾ ಓದುವುದನ್ನು ಮುಂದುವರಿಸಿದಳು. ಬರೆಯುವುದನ್ನೂ ಆರಂಭಿಸಿದಳು. ಅವಳ ಲೇಖನಗಳು ಪತ್ರಿಕೆಯಲ್ಲಿ ಪ್ರಕಟವಾದುವಲ್ಲದೆ, ಅವಳು ಬರೆದ ಕಥೆಯೊಂದನ್ನು ಪ್ರಕಟಿಸಿದ್ದಕ್ಕಾಗಿ "ಫ್ಯಾಮಿಲಿ ಹೆರಾಲ್ಡ್" ಪತ್ರಿಕೆ ಮೂವತ್ತು ಷಿಲಿಂಗ್ ಸಂಭಾವನೆಯನ್ನು ಕೊಟ್ಟಿತು. ಆಕೆ ತನ್ನ ಲೇಖನಗಳಿಗಾಗಿ ಪಡೆದ ಮೊದಲನೆಯ ಸಂಭಾವನೆಯಿದು.

ಓದುವುದು, ಬರೆಯುವುದರಲ್ಲಿ ಆನಿ ತೋರುತ್ತಿದ್ದ 'ವಿಪರೀತ' ಆಸಕ್ತಿ ಫ್ರಾಂಕ್ ಬೆಸೆಂಟರಿಗೆ ಅಷ್ಟಾಗಿ ಹಿಡಿಸಲಿಲ್ಲವೇನೋ-ಹಳೇ ಪದ್ಧತಿಯಲ್ಲಿ ಬೆಳೆದಾತ ಅವನು. ಇದಲ್ಲದೆ ಈ ವಿಶೇಷ ವಿದ್ಯಾಸಕ್ತಿಯಿಂದ ತನ್ನ ಹೆಂಡತಿ ತನ್ನ ವಿಚಾರವಾಗಿ ಎಷ್ಟು ಆಸಕ್ತಿ ವಹಿಸಿಬೇಕೋ ಅಷ್ಟು ಆಸಕ್ತಿ ವಹಿಸುತ್ತಿಲ್ಲವೆಂಬ ಭಾವನೆಯೂ ಆತನ ಮನಸ್ಸಿನಲ್ಲಿ ಮೂಡಿರಬೇಕು.

ಹೀಗೆ ಅವರವರ ಸಂಬಂಧದಲ್ಲಿ ಆಗಲೇ ಘರ್ಷಣೆ ಮೊಳೆತಿತ್ತಾದರೂ ಅದು ಮೇಲೆದ್ದು ಬಂದು ಮುಳ್ಳಾಗಲು ಕೆಲಕಾಲ ಹಿಡಿಯಿತು.

ಏತನ್ಮಧ್ಯೆ ೧೮೬೯ನೇ ಜನವರಿಯಲ್ಲಿ ಆನಿ ಬೆಸೆಂಟ್‌ಗೆ ಆಕೆಯ ಜ್ಯೇಷ್ಠ ಪುತ್ರ ಹುಟ್ಟಿದ. ಈ ಮಗುವಿನ ರಕ್ಷಣೆ, ಪೋಷಣೆಯ ಹೊಸ ಹೊಣೆಗಾರಿಕೆ

ತಗುಲಿಕೊಂಡ ಮೇಲೆ ಆನಿಯ ಓದು ಬರಹದ ಕಾತರ ಕಡಮೆಯಾಯಿತು, ಸಂಸಾರ ರಸವತ್ತಾಗಿಯಲ್ಲವಾದರೂ ಹೆಚ್ಚು ವಿರಸವಿಲ್ಲದೆ ಮುಂದುವರೆಯಿತು. ಒಂದೂವರೆ ವರ್ಷ ಕಳೆಯಿತು.

೧೮೭೦ನೇ ಆಗಸ್ಟ್‌ನಲ್ಲಿ ಆನಿಬೆಸೆಂಟ್‌ಗೆ ಎರಡನೆಯ ಮಗು ಹುಟ್ಟಿತು; ಈ ಬಾರಿ ಹೆಣ್ಣು ಮಗು. ಈ ಹೆರಿಗೆ ತಾಯಿಗೆ ಹೆಚ್ಚು ಆಯಾಸವನ್ನುಂಟು ಮಾಡಿತು; ಮಗುವಿನ ಆರೋಗ್ಯ ಕೂಡ ಸಮರ್ಪಕವಾಗಿರಲಿಲ್ಲ.

ಈ ಹೆಣ್ಣು ಮಗು ಎಂಟೊಂಭತ್ತು ತಿಂಗಳಿನದಾಗಿದ್ದಾಗ, ಅದಕ್ಕೂ, ಹಿರಿಯ ಗಂಡುಮಗುವಿಗೂ ಒಮ್ಮೆಲೇ ನಾಯಿ ಕೆಮ್ಮು ಬಂತು. ಹೆಣ್ಣು ಮಗುವಿನ ಆರೋಗ್ಯ ಮೊದಲೇ ಚೆನ್ನಾಗಿರಲಿಲ್ಲವಾಗಿ ನಾಯಿ ಕೆಮ್ಮು ಅದನ್ನು ಇನ್ನಷ್ಟು ನಿಶ್ಯಕ್ತಿಗೊಳಿಸಿತು ನಾಯಿ ಕೆಮ್ಮಲು ಪ್ರಬಲ ಕಾಸಕ್ಕೆ ತಿರುಗಿಕೊಂಡು ಮಗುವಿನ ಶ್ವಾಸಕೋಶದ ಮೇಲೆ ದುಷ್ಪರಿಣಾಮವನ್ನುಂಟು ಮಾಡಿತು. ಈ ರೋಗಕ್ಕೆ ಗುರಿಯಾದ ಮಗು ಅನುಭವಿಸುತ್ತಿದ್ದ ನೋವು; ಅದರ ನರಳಾಟ, ಸಂಕಟಗಳನ್ನು ನೋಡಿ ನೋಡಿ—ಅದೂ ವಾರ ವಾರಗಳ ವರೆಗೆ— ಆನಿ ಬೆಸೆಂಟ್ ತುಂಬಾ ದುಃಖಿಸಿದಳು. ನೋವಿನ ಜ್ವಾಲೆಯಿಂದ ಕಾಯುತ್ತಿದ್ದ ದುಃಖದ ಮೂಸೆಯಲ್ಲಿ ಆನಿಯ ಹೃದಯ ಬೇಯುತ್ತಿದ್ದಾಗ, ಅವಳ ಆಲೋಚನೆಯ ಕತ್ತಿ ವಿವೇಚನೆಯ ಸಾಣೆಗಲ್ಲಿಗೆ ಸಿಕ್ಕಿ ಹರಿತ ವಾಗುತ್ತಿತ್ತು. ನೋವು ಹೆಚ್ಚಿದಂತೆ ಆಲೋಚನೆ ಹರಿತವಾಯಿತು. ಆಲೋಚನೆ ಹರಿತಗೊಂಡಂತೆ, ಅದು, ಅವಳ ಧಾರ್ಮಿಕ ನಂಬಿಕೆಗಳನ್ನು ಛಿದ್ರಛಿದ್ರ ಮಾಡಲು ಮೊದಲಿಟ್ಟಿತು!

ಅಂಧನಂಬಿಕೆಯಿದ್ದೆಡೆಯಲ್ಲಿ ಸಂದೇಹಗಳು ತುಂಬಿಕೊಂಡವು. ದೇವರು ದಯಾಮಯನಾಗಿದ್ದರೆ, ಈ ಲೋಕದಲ್ಲಿ ಜನ ಏಕೆ ದುಃಖ, ನೋವನ್ನನುಭವಿಸಬೇಕು? ಪಾಪ! ಏನೂ ಅರಿಯದ ಕಂದಗಳು ಕಾಯಿಲೆ ಯಿಂದ ನರಳಿ ನರಳಿ ನವೆಯುವಂತೆ ಮಾಡುವ ದೇವರು ದಯಾಮಯನೆ? ಈ ಲೋಕದಲ್ಲಿ ತಪ್ಪು ಮಾಡಿದವರು ಮುಂದೆ ಎಂದೆಂದಿಗೂ ನರಕದಲ್ಲಿ ಶಿಕ್ಷೆಯನ್ನನುಭವಿಸಬೇಕೆಂಬ ಕ್ರೈಸ್ತಮತ ತತ್ವ ನ್ಯಾಯವಾದದ್ದೇ?........ ಹೀಗೆ ಹಲವಾರು ಸಮಸ್ಯೆಗಳು ಸಂದೇಹಗಳು ಅವಳ ಮನಸ್ಸನ್ನು ಮುತ್ತಿ ದುವು. ಮಗುವಿಗೆ ಕಾಯಿಲೆ ಬಲವಾಗಿದ್ದಾಗ, ಆನಿಯ ಗಮನ ಪೂರ್ಣ

ವಾಗಿ ಮಗುವಿನ ಕಡೆಗಿರುತ್ತಿತ್ತಾಗಿ ಈ ಸಮಸ್ಯೆಗಳನ್ನು ಕುರಿತು ದೀರ್ಘವಾಗಿ ವಿವೇಚನೆ ಮಾಡಲು ಅವಳಿಗೆ ಅವಕಾಶವಿರುತ್ತಿರಲಿಲ್ಲ.

ಕಾಲಕ್ರಮದಲ್ಲಿ ಮಗುವಿಗೆ ಗುಣವಾದಮೇಲೆ, ಆನಿಯ ಮನಸ್ಸು ಹಗಲಿರುಳು ಈ ಸಮಸ್ಯೆಗಳನ್ನೇ ಕುರಿತು ಚಿಂತಿಸತೊಡಗಿತು. ಕ್ರೈಸ್ತ ಧರ್ಮದಲ್ಲಿದ್ದ ಅವಳ ನಂಬಿಕೆ ಪೂರ್ಣವಾಗಿ ನಾಶವಾಯಿತು.

ಅದು ಹಾಗೆ ನಾಶವಾಗುವ ಮೊದಲು ಅವಳು ಅನುಭವಿಸಿದ ಮಾನಸಿಕ ವೇದನೆ ಅಷ್ಟಿಷ್ಟಲ್ಲ.

ಪರಿಸ್ಥಿತಿ ನೆಟ್ಟಗಿದ್ದ ಸಂದರ್ಭಗಳಲ್ಲೇ ಸಂಸಾರದಲ್ಲಿ ವಿರಸಮೂಡುವುದುಂಟು. ಹೀಗಿರುವಾಗ, ಮನೆಯಲ್ಲಿ ಹುಟ್ಟಿಕೊಂಡ ರೋಗ ರುಜಿನವೇ ಮುಂತಾದ ಕಷ್ಟಗಳೂ ಆನಿಯ ಚಿಂತಾಕ್ರಾಂತಾಸ್ಥಿತಿಯೂ, ಸುಖ ಸಂಸಾರದ ರಸಮಯ ಚಿತ್ರಗಳನ್ನು ಕಲ್ಪಿಸಿಕೊಂಡಿದ್ದ ಫ್ರಾಂಕ್ ಬೆಸೆಂಟ್‌ನಿಗೆ ತುಂಬಾ ಬೇಸರವನ್ನುಂಟು ಮಾಡಿದುವು. ಆತ, ಆನಿಯೊಡನೆ ಹೆಚ್ಚು ಸಹಾನುಭೂತಿಯಿಂದ, ಮಮತೆಯಿಂದ, ನಂಬಿಕೆಯಿಂದ ವರ್ತಿಸಿದ್ದರೆ ಅವಳ ಸಂದೇಹಗಳಲ್ಲದಿದ್ದರೆ ಮನೋವೇದನೆ, ಹೃದಯ ವೇದನೆಗಳಾದರೂ ಕಡಿಮೆಯಾಗುತ್ತಿದ್ದುವು.

ಆದರೆ ಫ್ರಾಂಕ್ ಬೆಸೆಂಟ್ ಹಳೆಯ ಸಂಪ್ರದಾಯದಲ್ಲಿ ಬೆಳೆದವನು. ಹೆಣ್ಣಿನಿಂದ ಸುಖವನ್ನಪೇಕ್ಷಿಸುವುದು ಗಂಡಿನ ಹಕ್ಕು ಎಂದು ಭಾವಿಸಿದ್ದ ಆತನ ವರ್ತನೆ, ಆನಿ ಮತ್ತು ಆತನ ನಡುವೆ ವಿರಸವನ್ನು ಹೆಚ್ಚಿಸಿತೇ ವಿನಾ ಸಮರಸವನ್ನು ಬೆಳೆಸಲಿಲ್ಲ.

ಹೀಗೆ ಕೆಲವು ಕಾಲ ಆನಿ, ಒಳಗೆ ಹೃದಯ ಮನಸ್ಸುಗಳ ಬೇಗೆಯನ್ನೂ ಹೊರಗೆ ವಿರಸ ಸಂಸಾರದ ಬೇಗೆಯನ್ನೂ ಅನುಭವಿಸಿದಳು; ವಿಧಿಯಿಲ್ಲದೆ ಅನುಭವಿಸಿದಳು. ಕೊನೆಗದು ಅವಳಿಗೆ ಅಸಹನೀಯವಾಗಿ ತೋರಿತು.

ಒಂದು ದಿನ ಸಂಜೆಯ ಹೊತ್ತಿನಲ್ಲಿ ಗಂಡಹೆಂಡರಿಗೆ ಮಾತುನಡೆದು ಫ್ರಾಂಕ್ ಬೆಸೆಂಟ್ ಆನಿಯನ್ನು ಚೆನ್ನಾಗಿ ದಂಡಿಸಿ ಹೊರಟು ಹೋದನು. ಆ ಸನ್ನಿವೇಶದಲ್ಲಿ ಆನಿಗೆ ಇನ್ನುಮುಂದೆ ಬಾಳುವುದು ಬೇಡ ಎನಿಸಿತು. ತನ್ನ ಬಾಳನ್ನು ಕೊನೆಗಾಣಿಸಿಕೊಳ್ಳಬೇಕೆಂದು ಆಕೆ ನಿರ್ಧರಿಸಿ ತನ್ನ ಕೊಟಡಿಗೆ ಹೋಗಿ ಕ್ಲೋರೋಫಾರಂ ಸೀಸೆಯನ್ನು ತಂದಳು. ಅದನ್ನು ತನ್ನ ಮೇಲೆ

ಪ್ರಯೋಗಿಸಿಕೊಂಡು ಸಾಯಬೇಕೆಂದು ಪ್ರಯತ್ನಿಸುತ್ತಿರವಾಗ, ಯಾರದೋ ದೂರದ ಧ್ವನಿ ಆಕೆಗೆ ಸ್ಪಷ್ಟವಾಗಿ ಕೇಳಿಸಿತು: "ಛೆ! ಹೇಡಿ! ಧರ್ಮಕ್ಕಾಗಿ ಮರಣವನ್ನಾದರೂ ಅಪ್ಪುವ, ಹುತಾತ್ಮಳಾಗುವ ಧೈರ್ಯವಿದ್ದ ನೀನು ಹೀಗೆ ಹೇಡಿಯಾಗುವುದೇ? ಕೆಲವು ಕಾಲ ಈ ಸಂಕಟವನ್ನೂ ಸಹಿಸಿಕೊಂಡು ಇರಲಾರೆಯಾ?" ಈ ಮಾತು ಆತ್ಮಹತ್ಯೆಯಲ್ಲಿ ತೊಡಗಿದ್ದ ಆನಿಗೆ ತುಂಬಾ ನಾಚಿಕೆಯನ್ನುಂಟು ಮಾಡಿತು.

ಇಂಥ ಸನ್ನಿವೇಶದಲ್ಲಿ ಹೇಡಿಯಂತೆ ವರ್ತಿಸುವುದು ಸಲ್ಲದೆಂದು ಆನಿ ನಿರ್ಧರಿಸಿ, ಕ್ಲೋರೋಫಾರಂ ಸೀಸೆಯನ್ನು ದೂರ ಬಿಸಿಟು ಬಿಟ್ಟಳು.

ಮುಂದೆ?– ಅವಳ ಧರ್ಮ ಸಂಶಯ ಬಲಗೊಳ್ಳುತ್ತಲೇ ನಡೆಯಿತು. ಅದನ್ನು ಪರಿಹರಿಸಿಕೊಳ್ಳಲು ಅವಳು ತನ್ನಿಂದಾದ ಪ್ರಯತ್ನಗಳನ್ನೆಲ್ಲಾ ಮಾಡಿದಳು. ಕ್ರೈಸ್ತ ಧರ್ಮವನ್ನು, ಅದರ ತತ್ವ, ರಹಸ್ಯಗಳನ್ನು ಕುರಿತು ಪ್ರಕಟವಾಗಿದ್ದ ನಾನಾ ಗ್ರಂಥಗಳನ್ನು ಎಚ್ಚರಿಕೆಯಿಂದ ಓದಿದಳು. ಅದಾವುದರಿಂದಲೂ ಆಕೆಗೆ ಮನಸ್ಸಮಾಧಾನ, ಶಾಂತಿ ದೊರೆಯಲಿಲ್ಲ. ಕ್ರೈಸ್ತ ಧರ್ಮದ ತತ್ವದ ವಿಚಾರವಾಗಿ ಆಕೆಗೆ ಮೂಡಿದ್ದ ಸಂಶಯಗಳು ನಿವಾರಣೆಯಾಗಲಿಲ್ಲ.

ಅನಂತರ ಆಕೆ, ಕ್ರೈಸ್ತಧರ್ಮ ಪ್ರತಿಪಾದನೆಯಲ್ಲಿ ತುಂಬಾ ದಕ್ಷರೆಂದು ಪ್ರಸಿದ್ಧರಾಗಿದ್ದ ಪೂಸೆ ಮುಂತಾದವರಲ್ಲಿಗೆ ಹೋಗಿ ತನ್ನ ಸಂದೇಹಗಳನ್ನು ನಿವೇದಿಸಿಕೊಂಡು, ಅವನ್ನು ಪರಿಹರಿಸಬೇಕೆಂದು ಕೇಳಿಕೊಂಡಳು. ಅವರಿಂದಲೂ ಅವಳ ಸಂದೇಹಗಳಿಗೆ ಸಮರ್ಪಕವಾದ ಉತ್ತರ ಬರಲಿಲ್ಲ. ಪೂಸೆ ಆಕೆಯ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರ ಹೇಳಲಾರದೆ "ಮಗಳೇ, ನೀನಿನ್ನೇನನ್ನೂ ಓದಬೇಡ. ಅವಶ್ಯಕವಾದುದಕ್ಕಿಂತ ಹೆಚ್ಚಿಗೆ ಓದಿಯೇ ನಿನಗೆ ಈ ಕಷ್ಟ ಬಂದಿದೆ. ದೇವರ ದಯಾಮಯತೆಯನ್ನೂ, ಕ್ರಿಸ್ತನ ದೈವತ್ವವನ್ನೂ ನಂಬಿ, ಪೂರ್ಣಶ್ರದ್ಧೆಯಿಂದ ಪ್ರಾರ್ಥನೆಮಾಡು" ಎಂದು ಉಪದೇಶಿಸಿ ಸುಮ್ಮನಾದನು.

ಈ ಪ್ರಸಂಗ, ಈ ಉಪದೇಶ ಆಕೆಯ ಸಂದೇಹಗಳನ್ನು ಇನ್ನಷ್ಟು ಬಲಪಡಿಸಿತೇ ವಿನಾ, ಅವನ್ನು ಪರಿಹರಿಸಲು ಸಮರ್ಥವಾಗಲಿಲ್ಲ. ಆನಿಯ ಮಾನಸಿಕ ವೇದನೆ ಮತ್ತೆ ಬಲವಾಯಿತು. ಆಕೆಯ ಆರೋಗ್ಯವೂ ಕೆಟ್ಟಿತು. ವಿಶ್ರಾಂತಿಗಾಗಿ ಆಕೆ ಸಿಬ್ಸೆಯಲ್ಲಿದ್ದ ತನ್ನ ಗಂಡನ ಮನೆಯನ್ನು ಬಿಟ್ಟು

ಲಂಡನ್ನಿಗೆ ಬಂದಳು.

ಅಲ್ಲಿ ಆಕೆಗೆ ಥಾಮಸ್ ಸ್ಕಾಟ್ ಮುಂತಾದ ಸ್ವತಂತ್ರಭಾವನಾವಾದಿಗಳ ಪರಿಚಯವಾಯಿತು. ಪ್ರತ್ಯಕ್ಷ ಪ್ರಮಾಣವಿಲ್ಲದ ಯಾವ ಅಂಶವನ್ನು ಒಪ್ಪ ಕೂಡದು, ನಂಬಕೂಡದು ಎಂಬ ಅವರ ಸಿದ್ಧಾಂತ ಆನಿಯನ್ನು ಆಕರ್ಷಿಸಿತು. ಆ ಕಾಲದಲ್ಲಿ ಆನಿಗೆ ನಿರೀಶ್ವರವಾದಿಗಳ ಪರಿಚಯವೂ ಆಯಿತು. ಈ ಹೊಸ ಪ್ರಭಾವಕ್ಕೊಳಗಾಗಿ ಆನಿ ಕ್ರಿಸ್ತನ ದೇವತ್ವವನ್ನು ಕುರಿತು ಬಹಿರಂಗ ವಾಗಿ ಚರ್ಚಿಸುವ ಮಟ್ಟಕ್ಕೆ ಬಂದಳು. "ನಾಜರೆತ್‌ನ ಯೇಸುವಿನ ದೇವತ್ವ" ಎಂಬ ಪ್ರಬಂಧವನ್ನು ಬರೆದು ೧೮೭೩ರಲ್ಲಿ ಪ್ರಕಟಿಸಿದಳು. ಯೇಸುವು ನಿಜ ವಾಗಿ ದೇವರೇ ಆಗಿದ್ದರೆ, ನಮ್ಮ ಚರ್ಚೆಯಿಂದ ಆತನ ದೇವತ್ವಕ್ಕೆ ಭಂಗಬರು ವುದಿಲ್ಲ. ಆತನು ಮನುಷ್ಯನಾಗಿದ್ದರೆ ಆತನನ್ನು ಪೂಜಿಸುವುದು ತಪ್ಪು ಮತ್ತು ತಿಳಿಗೇಡಿತನ ಎಂಬ ಅಭಿಪ್ರಾಯವನ್ನವಳು ಆ ಲೇಖನವಲ್ಲಿ ಸೂಚಿಸಿ ದ್ದಳು. ಈ ಲೇಖನಕ್ಕೆ ಆಕೆ ತನ್ನ ಹೆಸರು ಹಾಕದೆ, "ಪಾದ್ರಿಯೊಬ್ಬನ ಹೆಂಡತಿಯಿಂದ" ಎಂದು ಅಂಕಿತ ಮಾಡಿದ್ದಳಾದರೂ ಅದನ್ನು ಬರೆದವಳು ತನ್ನ ಹೆಂಡತಿಯೇ ಎಂದು ಅರ್ಥಮಾಡಿಕೊಳ್ಳಲು ಫ್ರಾಂಕ್ ಬೆಸೆಂಟ್‌ರಿಗೆ ಕಷ್ಟ ವಾಗಲಿಲ್ಲ. ತನ್ನ ಹೆಂಡತಿ, ತನ್ನ ಅನುಮತಿಯಿಲ್ಲದೆ ಅಂಥ ಲೇಖನವನ್ನು ಪ್ರಕಟಿಸಿದ್ದು ದೊಡ್ಡ ಅಪರಾಧವೆಂದೆನಿಸಿತು ಆತನಿಗೆ. ತಾನು ಕ್ರೈಸ್ತಧರ್ಮ ಬೋಧಕನಾಗಿರುವಾಗ ತನ್ನ ಹೆಂಡತಿಯೇ ಆ ಬೋಧನೆಗಳಿಗೆ ವಿರುದ್ಧವಾಗಿ ಪ್ರಚಾರ ಮಾಡುತ್ತಿರುವುದು ಆತನಿಗೆ ಸರಿಬೀಳಲಿಲ್ಲ. ಆಕೆಯ ಅಭಿಪ್ರಾಯ ಗಳು ಅವೇನೇ ಇರಲಿ, ತಾನು ಕ್ರೈಸ್ತಧರ್ಮ ಬೋಧಕನಾದ್ದರಿಂದ, ಆನಿ ಹೊರಗಿನ ತೋರಿಕೆಗಾದರೂ ಕ್ರೈಸ್ತಧರ್ಮದ ಆಚಾರಗಳಿಗೆ ತಲೆ ಬಾಗಿ ನಡೆಯಬೇಕೆಂದು ಅಪೇಕ್ಷಿಸಿದನು; ಚರ್ಚಿನಲ್ಲಿ ನಡೆಯುವ ಪೂಜಾದಿ ಸೇವೆಗಳಲ್ಲಿ ಅವಳು ಭಾಗವಹಿಸಿಯೇ ತೀರಬೇಕೆಂದು ಒತ್ತಾಯಮಾಡಿದನು.

ಏಸುಕ್ರಿಸ್ತನ ದೇವತ್ವದಲ್ಲಿ ನಂಬಿಕೆಯನ್ನು ಕಳೆದುಕೊಂಡಿದ್ದ ಆನಿಗೆ, ಆ ನಂಬಿಕೆಯ ಆಧಾರದ ಮೇಲೆ ರಚಿತವಾದ ಕಾರ್ಯಕ್ರಮಗಳಲ್ಲಿ ಭಾಗ ವಹಿಸಲು ಮನಸ್ಸೊಪ್ಪಲಿಲ್ಲ. ಒಳಗೊಂದು, ಹೊರಗೊಂದು ಎಂಬ ಕಪಟ ಮನೋವೃತ್ತಿ ಅವಳಿಗೆ ಸರಿಬೀಳಲಿಲ್ಲ. ಆದ್ದರಿಂದ ಗಂಡನ ಒತ್ತಾಯಕ್ಕೊಳ ಗಾಗಿ ನಡೆದುಕೊಳ್ಳಲು ಆಕೆ ಒಪ್ಪಲಿಲ್ಲ.

ಇದರಿಂದಾಗಿ, ಮೊದಲೇ ವಿರಸವಾಗಿದ್ದ ಅವಳ ದಾಂಪತ್ಯಜೀವನ ಇನ್ನಷ್ಟು ವಿರಸವಾಯಿತು. ಗಂಡನೊಡನಿದ್ದು ಆತನ ಅಪೇಕ್ಷೆ, ಆಚರಣೆಗಳಿಗೆ ವ್ಯತಿರಿಕ್ತ ವರ್ತಿಸಿ ಆತನನ್ನು ಕೆರಳಿಸುವುದು ಬೇಡವೆಂದು ಆನಿ ತನ್ನ ತಾಯಿಯ ಮನೆಗೆ ಬಂದುಬಿಟ್ಟಳು.

ಎಮಿಲಿಗೆ ಮಗಳ ವಿಚಾರವಾಗಿ ತುಂಬಾ ಪ್ರೀತಿಯಿದ್ದಿತಾದರೂ, ಅವಳು ತನ್ನ ಗಂಡನಿಂದ ಬೇರೆಯಾಗಿರುವುದು, ಆಕೆಗೆ ಸರಿಬೀಳಲಿಲ್ಲ.

ಆಗ ಆನಿಗಾದರೊ ಎಷ್ಟು ವಯಸ್ಸು ? ಇಪ್ಪತ್ತಾರು ವರ್ಷ ಮಾತ್ರ ! ಈ ತಾರುಣ್ಯದಲ್ಲಿ ತನ್ನ ಮಗಳು ಗಂಡನಿಂದ ಬೇರೆಯಾಗಿರಬೇಕಾದಂಥ ಸಂದರ್ಭವುಂಟಾದುದು ಎಮಿಲಿಗೆ ತುಂಬಾ ದುಃಖವನ್ನುಂಟುಮಾಡಿತು. ಆದರೇನು ಮಾಡುವುದು. ತನ್ನ ಆತ್ಮಸಾಕ್ಷಿಗೆ ವಿರುದ್ಧವಾಗಿ ನಡೆದುಕೊಳ್ಳಲು ಬಾಳಲು ಆನಿ ಒಪ್ಪಲಿಲ್ಲ. ಅಂಥ ಅಸತ್ಯಜೀವನವನ್ನು ನಡೆಸುವಂತೆ ಅವಳನ್ನು ಪ್ರೇರೇಪಿಸುವುದು ಯಾರಿಂದಲೂ ಸಾಧ್ಯವಾಗಲಿಲ್ಲ.

ಆದ್ದರಿಂದ ಮುಂದೇನು ಎಂಬ ಸಮಸ್ಯೆ ಹುಟ್ಟಿತು. ಆರೋಗ್ಯ ಅಷ್ಟು ಚೆನ್ನಾಗಿಲ್ಲದ ತನ್ನ ಹೆಣ್ಣುಮಗುವನ್ನು ರಕ್ಷಣೆಗಾಗಿ ತನ್ನ ವಶಕ್ಕೆ ತೆಗೆದುಕೊಂಡು, ತನ್ನ ಗಂಡನಿಂದ ಬೇರೆಯಾಗಿ ವಾಸಿಸಬೇಕೆಂದು ಆಕೆ ನಿರ್ಧರಿಸಿ, ತನ್ನ ಸಹೋದರನ ಮೂಲಕ ಈ ವ್ಯವಸ್ಥೆಗೆ ನ್ಯಾಯಸ್ಥಾನದ ಅನುಮತಿಯನ್ನು ಪಡೆದಳು. ಈ ಸಂದರ್ಭದಲ್ಲಿ ಫ್ರಾಂಕ್ ಬೆಸೆಂಟ್, ತನ್ನ ಹೆಂಡತಿ ಪಾಷಂಡಿಗಳ, ನಿರೀಶ್ವರವಾದಿಗಳ ಸಹವಾಸವನ್ನು ಬಿಟ್ಟು ಕ್ರೈಸ್ತಧರ್ಮದಲ್ಲಿ ನಂಬಿಕೆಯಿಟ್ಟು ಬಾಳುವುದಾದರೆ ತಾನು ಆಕೆಗೆ ಹೆಚ್ಚು ಜೀವನಾಂಶವನ್ನೂ, ವಾಸಮಾಡಲು ಒಂದು ಒಳ್ಳೆಯ ಮನೆಯನ್ನೂ ಕೊಡುವುದಾಗಿ ಹೇಳಿದನು. ಆನಿ ತನ್ನ ಆತ್ಮಸಾಕ್ಷಿಗೆ ವಿರುದ್ಧವಾಗಿ ನಡೆಯಲು ಒಪ್ಪದೆ, ಈ ಸೂಚನೆಯನ್ನು ನಿರಾಕರಿಸಿ, ಅಲ್ಪ ಜೀವನಾಂಶವನ್ನೇ ಒಪ್ಪಿಕೊಂಡು ತನ್ನ ಗಂಡನಿಂದ ಬೇರೆಯಾದಳು. ಕ್ರೈಸ್ತಧರ್ಮದ ಆಚರಣೆಯನ್ನು ಸಂಪೂರ್ಣವಾಗಿ ತೊರೆದಳು.

೭

ಗಂಡನಿಂದ ಬೇರೆಯಾದದ್ದೇನೋ ಆಯಿತು ಮುಂದೆ? – ಆನಿಯ ಗಂಡ ಅವಳ ಮತ್ತು ಹೆಣ್ಣು ಮಗುವಿನ ಉದರಭರಣಕ್ಕೆಂದು ಕೊಡುತ್ತಿದ್ದ ಮಾಸಾಶನ ತೀರಾ ಕಡಮೆಯಾಗಿತ್ತಾಗಿ, ಬೇರೆ ಸಂಪಾದನೆಯನ್ನು ಕಲ್ಪಿಸಿ ಕೊಳ್ಳದೆ ಆನಿ ಗೌರವವಾಗಿ ಜೀವನ ನಡೆಸಲು ಸಾಧ್ಯವಿರಲಿಲ್ಲ. ಆದ್ದರಿಂದ ಅವಳು ಒಡನೆಯೇ ಯಾವುದಾದರೊಂದು ಕೆಲಸವನ್ನು ಕೈಗೊಳ್ಳ ಬೇಕಾಯಿತು. ಆದರೆ ಕೆಲಸ ಸಿಕ್ಕಬೇಕಲ್ಲ? ಕೆಲಸ ಸಿಕ್ಕಲಿಲ್ಲವೆಂದು ಸುಮ್ಮನೆ ಕುಳಿತರೆ ಸಂಸಾರಸಾಗಿಸುವುದು ಹೇಗೆ? ಆದ್ದರಿಂದ ಆನಿ ಕಸೂತಿ ಕೆಲಸಮಾಡುತ್ತಾ ವಾರಕ್ಕೆ ನಾಲ್ಕೂವರೆ ಷಿಲಿಂಗ್‌ನಂತೆ ಸಂಪಾದನೆ ಮಾಡಿದಳು ಕೆಲವುವಾರ. ಇದರಿಂದ ಅವಳ ಕಷ್ಟ ನೀಗಲಿಲ್ಲ. ಸ್ಥಿತಿ ಸುಗಮವಾಗಲಿಲ್ಲ.

ಅಮೇಲೆ, ತನ್ನ ಅಜ್ಜಿ ಮತ್ತು ಚಿಕ್ಕಮ್ಮನ ಸೂಚನೆಯಂತೆ ಅವರು ವಾಸಿಸುತ್ತಿದ್ದ ಫೋಕ್‌ಸ್ಟೋನ್‌ಗೆ ಹೋಗಿ ನೆಲಸಿ ಮನೆವಾರ್ತೆಯ ವೃತ್ತಿ ಯನ್ನು ಕೈಗೊಂಡಳು. ತಾನು ಕೆಲಸಕ್ಕಿದ್ದೆಡೆಯಲ್ಲಿ ಅಡಿಗೆ ಮಾಡುವುದು, ಮನೆ ಕೆಲಸ ನೋಡಿಕೊಳ್ಳುವುದು, ದಾದಿಯಾಗಿ ಆರೈಕೆ ಮಾಡುವುದು ಅವಳ ಕರ್ತವ್ಯವಾಗಿತ್ತು. ಇದರಿಂದಲೂ ಆನಿಯ ಆರ್ಥಿಕ ಸ್ಥಿತಿ ಉತ್ತಮ ಗೊಳ್ಳಲಿಲ್ಲ. ಆದರೂ ವಿಧಿಯಿಲ್ಲದೆ ಈ ವೃತ್ತಿಯಲ್ಲಿ ಕೆಲವು ತಿಂಗಳುಗಳನ್ನು ಕಳೆದಳು.

ಇಂಥ ವೃತ್ತಿ ಆನಿ ಬೆಸೆಂಟ್‌ಗೆ ಒಗ್ಗಿ ಬರುವಂಥದಲ್ಲವೆಂಬುದು ಸುಸ್ಪಷ್ಟ. ಅಂದರೆ ಅವಳು ಇತರರ ಸೇವೆಮಾಡಲು ಹಿಂಜರಿಯುತ್ತಿದ್ದ ಳೆಂದಲ್ಲ. ಮನವಾರ್ತೆಯಂಥ ವೃತ್ತಿಯಲ್ಲಿರುವಾಗ ಓದು ಬರಹಗಳಿಗೆ ಅವಕಾಶವೇ ಇರುತ್ತಿರಲಿಲ್ಲ. ಬುದ್ಧಿಜೀವಿಯಾದ ಆನಿ ಬೆಸೆಂಟ್ ಓದು ಬರಹ ವಿಲ್ಲದೆ ಬಾಳಲು ಸಾಧ್ಯವಿರಲಿಲ್ಲ.

ತುಂಬಾ ಚಿಕ್ಕವಯಸ್ಸಿನಲ್ಲಿ ಆನಿಯ ಬಾಳು ಹೀಗೆ ನಿರಾಶ್ರಿತವಾದುದು ಆಕೆಯ ತಾಯಿಯನ್ನು ತುಂಬಾ ವ್ಯಥೆಗೊಳಗುಮಾಡಿತು. ಆಕೆಯ

ಆರೋಗ್ಯ ಕೆಟ್ಟಿತು. ಆಕೆ ೧೮೭೪ ನೇ ಮೇ ಹತ್ತನೆಯ ತಾರೀಖು ತೀರಿಕೊಂಡಳು. ಈ ವಿಯೋಗಕ್ಕಾಗಿ ಆನಿ ತುಂಬಾ ನೊಂದುಕೊಂಡಳು. ತನ್ನ ಸ್ಥಿತಿಗತಿಗಳನ್ನು ಕುರಿತು ತೀವ್ರವಾಗಿ ಆಲೋಚಿಸಿ, ಫೋಕ್‌ಸ್ಟೋನ್ ಅನ್ನು ಬಿಟ್ಟು ಲಂಡನ್ನಿಗೆ ಬಂದಳು. ಪ್ರತ್ಯಕ್ಷ ಪ್ರಮಾಣವಾದಿಯಾಗಿದ್ದ ಥಾಮಸ್ ಸ್ಕಾಟ್‌ರವರನ್ನು ಕಂಡು, ಅವರ ಸಹಾಯ ಪಡೆದು ಅವರ ಮನೆಗೆ ಹತ್ತಿರವಾಗಿಯೇ ಒಂದು ಸಣ್ಣ ವಸತಿಯಲ್ಲಿ ನೆಲೆಸಿ, ತನ್ನ ವಾಚನ, ಲೇಖನ ಕಾರ್ಯವನ್ನು ಮುಂದುವರೆಸಿ ಸ್ವತಂತ್ರಭಾವನಾವಾದವನ್ನು ಪ್ರತಿಪಾದಿಸುವ ಚಿಕ್ಕಚಿಕ್ಕ ಪುಸ್ತಕಗಳನ್ನು ಬರೆದಳು. ಸ್ಕಾಟ್‌ರವರು ಅವುಗಳನ್ನು ಪ್ರಕಟಿಸಿದರು. ಅಲ್ಲದೆ ಆನಿ ಬೆಸೆಂಟ್‌ಗೆ "ನ್ಯಾಷನಲ್ ರಿಫಾರ್ಮರ್" ಪತ್ರಿಕೆಯ ಸಂಪಾದಕರೂ ಸುಪ್ರಸಿದ್ಧ ವ್ಯಕ್ತಿಸ್ವಾತಂತ್ರ್ಯ ವಾದಿಗಳೂ ಆದ ಚಾರಲ್ಸ್ ಬ್ರಾಡ್‌ಲಾರವರ ಪರಿಚಯ ಮಾಡಿಕೊಟ್ಟರು. ಹೀಗೆ ಆಕೆಯ ಪರಿಚಯ ಮತ್ತು ಸ್ನೇಹದ ವ್ಯಾಪ್ತಿ ಹೆಚ್ಚಾಯಿತಾದರೂ, ಓದಲು, ಬರೆಯಲು ಮತ್ತು ವಿಚಾರ ವಿನಿಮಯ ಮಾಡಲು ಹೆಚ್ಚು ಅವಕಾಶವುಂಟಾಯಿತಾದರೂ, ಆರ್ಥಿಕ ದೃಷ್ಟಿಯಿಂದ ಈ ದಿನಗಳು ತೀರಾ ಕೀಳಾಗಿಯೇ ಇದ್ದುವು. ಈ ಪರಿಸ್ಥಿತಿಯಲ್ಲಿ ಆಕೆ ಅನೇಕಬಾರಿ ಉಪವಾಸಮಾಡಬೇಕಾಯಿತು. ಅದಕ್ಕೆ ಆಕೆ ಸಗ್ಗಲಿಲ್ಲ. ಹೊಟ್ಟೆಗೆ ಇರಲಿ ಇಲ್ಲದಿರಲಿ, ಆನಿ ತನ್ನ ಓದು ಬರಹವನ್ನು ಕ್ರಮವಾಗಿ ನಡೆಸುತ್ತಾ ತನ್ನ ತಿಳಿವಳಿಕೆಯನ್ನು ವಿಸ್ತರಿಸಿಕೊಳ್ಳುತ್ತಲೇ ಇದ್ದಳು.

ಫ್ರಾಂಕ್ ಬೆಸೆಂಟ್‌ರವರಿಂದ ಬೇರೆಯಾಗುವ ಹೊತ್ತಿಗೆ ಆನಿ ಕ್ರೈಸ್ತ ಮತದಲ್ಲಿ ಪೂರ್ಣವಾಗಿ ನಂಬಿಕೆ ಕಳೆದುಕೊಂಡಿದ್ದಳು. ಆದರೆ ಆಕೆ ನಿರೀಶ್ವರವಾದಿಯಾಗಿರಲಿಲ್ಲ. ಆದರೆ ಹೊಸ ಸ್ನೇಹಗಳೂ ನಿರೀಶ್ವರವಾದಿ ಸಾಹಿತ್ಯದ ಪರಿಚಯವೂ ಕ್ರಮಕ್ರಮವಾಗಿ ಆಕೆಯನ್ನು ನಿರೀಶ್ವರವಾದಿಯನ್ನಾಗಿ ಮಾಡುತ್ತಿದ್ದುವು. ತನ್ನ ಭಾವನೆ ಈ ರೀತಿ ಮಾರ್ಪಡುತ್ತಿದೆಯೆಂಬುದರ ಅರಿವೂ ಅವಳಿಗುಂಟಾಗಿರಲಿಲ್ಲ. ಮೊದಲು ಮೊದಲು ಅವಳು ದೇವರ ಪ್ರಾರ್ಥನೆ ಅಕ್ರಮವಾಗಿ, ಆಮೇಲೆ ನಿಂತೇಹೋಯಿತು. ಕ್ರಮಕ್ರಮವಾಗಿ ದೇವರ ನೆನಪೇ ಅಳಿದು ಹೋಯಿತು.

ಆನಿ ಮತ್ತು ಫ್ರಾಂಕ್ ಬೆಸೆಂಟರ ನಡುವೆ ವಿರಸ ಬೆಳೆಯುತ್ತಿದ್ದಾಗ,

ಆನಿ, ತನ್ನ ತಾಯಿಯೊಡನೆ 'ಬಡವರ ನ್ಯಾಯವಾದಿ' ರಾಬರ್ಟ್ಸರನ್ನು ಕಂಡಿದ್ದಳೆಂದೂ ಆ ಸಂದರ್ಭದಲ್ಲಿ ಅವಳು ರಾಜಕೀಯದ ಕಡೆಗೆ ಆಕರ್ಷಿಸಲ್ಪಟ್ಟಳೆಂದೂ ಹಿಂದೆಯೇ ಹೇಳಿದೆಯಷ್ಟೆ. ಆನಿಯಲ್ಲಿ ದೇವರಲ್ಲಿ ನಂಬಿಕೆ ಕಡಮೆಯಾದಂತೆ, ಧರ್ಮಶ್ರದ್ಧೆ ಮಾಯವಾದಂತೆ ಆ ಸ್ಥಳವನ್ನು ರಾಜಕೀಯ ಚಳುವಳಿ, ಸಾಮಾಜಿಕ ಸೇವೆಗಳ ಹುರುಪು ಆಕ್ರಮಿಸಿತು. ದೀನದಳಿತರ ಸ್ಥಿತಿಗತಿಗಳನ್ನು ಉತ್ತಮಗೊಳಿಸಲು ರಾಜಕೀಯ ಹೋರಾಟ ನಡೆಸುವುದರಲ್ಲೂ, ಸ್ತ್ರೀಯರು ಮಕ್ಕಳು ಇವರಿಗೆ ಆಗುತ್ತಿದ್ದ ಸಾಮಾಜಿಕ ಅನ್ಯಾಯಗಳನ್ನು ಸರಿಪಡಿಸಲು ಪ್ರಯತ್ನಿಸುವುದರಲ್ಲೂ ಆಕೆಯ ಆಸಕ್ತಿ ಬೆಳೆಯಿತು, ಈ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದ ಹಲವರ ಪರಿಚಯವಾಯಿತು.

ಆನಿ ಹೀಗೆ ರಾಜಕೀಯ ಚಳವಳಿ, ಸಮಾಜಸುಧಾರಣೆಗಳಲ್ಲಿ ತೊಡಗಿದುದು ಆಕೆಯ ತಂದೆಯ ಮನೆಯವರಿಗಾಗಲೀ ತಾಯಿಯ ಮನೆಯವರಿಗಾಗಲೀ ಸರಿಬೀಳಲಿಲ್ಲ. ಗಂಡನ ಮನೆಯವರ ಮಾತು ಹೇಳಲೇಬೇಕಾಗಿಲ್ಲ. ಅವರು ಅವಳನ್ನು ದ್ವೇಷಿಸುವಂತಾದರು.

೮

ಈ ಸನ್ನಿವೇಶದಲ್ಲಿ ಆಕೆಗೆ ಚಾರಲ್ಸ್ ಬ್ರಾಡ್‌ಲಾರವರು ಪ್ರಕಟಿಸುತ್ತಿದ್ದ 'ನ್ಯಾಷನಲ್ ರಿಫಾರ್ಮರ್' ಪತ್ರಿಕೆಯ ಒಂದು ಸಂಚಿಕೆಯನ್ನೋದಿದ ಮೇಲೆ ಆನಿ ಬ್ರಾಡ್‌ಲಾರವರ ನಾಯಕತ್ವದಲ್ಲಿ ರೂಪುಗೊಂಡಿದ್ದ 'ನ್ಯಾಷನಲ್ ಸೆಕ್ಯುಲರ್ ಸೊಸೈಟಿ'ಗೆ ಸೇರಲು ಮನಸ್ಸು ಮಾಡಿದಳು.

೧೮೭೪ ನೇ ಆಗಸ್ಟ್ ೭ ನೇ ತಾರೀಖು ಆನಿ ಬೆಸೆಂಟ್ ಆ ಸಂಸ್ಥೆಗೆ ಸೇರಿದಳು. ಅಂದೇ ಚಾರಲ್ಸ್ ಬ್ರಾಡ್‌ಲಾರವರ ಭಾಷಣವನ್ನು ಕೇಳಿದಳು. ಬ್ರಾಡ್‌ಲಾರವರ ಸ್ವತಂತ್ರಭಾವನೆಗಳೂ, ಸೇವಾಭಾವ, ಕಾರ್ಯತತ್ಪರತೆಗಳೂ ಆಕೆಯ ಮೆಚ್ಚುಗೆಗೆ ಪಾತ್ರವಾದುವು. ಆತನೊಡನೆ ಸೇರಿ ಸಾರ್ವಜನಿಕ ಸೇವೆ ಮಾಡಬೇಕೆಂಬ ಅಪೇಕ್ಷೆಯುಂಟಾಯಿತು.

ಆನಿ ಬೆಸೆಂಟ್, ಬ್ರಾಡ್‌ಲಾರವರಿಗೆ ತನ್ನ ಈ ಅಪೇಕ್ಷೆಯನ್ನು ತಿಳಿಸಿ ಅವರು ಒಮ್ಮೆ ತನ್ನ ಮನೆಗೆ ಬರಬೇಕೆಂದು ಆಹ್ವಾನಿಸಿದಳು. ಬ್ರಾಡ್‌ಲಾರವರು "ನನ್ನ ಸ್ನೇಹದಿಂದ ನಿನಗೆ ಸುಖವಿಲ್ಲ. ಇಂಗ್ಲಿಷ್ ಸಮಾಜ ನನ್ನನ್ನು ದ್ವೇಷಿಸುತ್ತದೆ. ಆದ್ದರಿಂದ ನನ್ನನ್ನು ನಿನ್ನ ಮನೆಗೆ ಕರೆದರೆ, ನೀನು ಎಂಥ ಕಷ್ಟ ನಿಷ್ಠುರಗಳಿಗೆ ಗುರಿಯಾಗಬೇಕಾಗುವುದೆಂಬುದನ್ನು ಸಾವಧಾನವಾಗಿ ಆಲೋಚಿಸಿ, ಅಮೇಲೆ ನಿರ್ಧಾರಮಾಡು" ಎಂದು ಸೂಚಿಸಿ ಆನಿ ಬೆಸೆಂಟ್‌ಳ ಆಹ್ವಾನವನ್ನು ನಿರಾಕರಿಸಿದರು.

ಆದರೆ ಕೆಲವು ದಿನಗಳ ಅನಂತರ ಆನಿ ಬೆಸೆಂಟ್ ಅವರನ್ನು ಮತ್ತೆ ಆಹ್ವಾನಿಸಿದಾಗ ಅವರು ಅವಳ ಆಹ್ವಾನವನ್ನಂಗೀಕರಿಸಿದರು; ಪರಿಣಾಮ ಬ್ರಾಡ್‌ಲಾರವರು ನಿರೀಕ್ಷಿಸಿದ್ದಂತೆಯೇ ಆಯಿತು. ಸಂಪ್ರದಾಯವಾದಿಗಳ ಮಾತು ಹಾಗಿರಲಿ, ಬೆಸೆಂಟ್ ಒಡನೆ ಕೆಲಸಮಾಡುತ್ತಿದ್ದ ಸ್ವತಂತ್ರಭಾವನಾ ವಾದಿಗಳು ಕೂಡ ಆಕೆ ಬ್ರಾಡ್‌ಲಾರವರೊಡನೆ ಸೇರಿದ್ದನ್ನು ಒಪ್ಪಲಿಲ್ಲ. ತನಗೆ ಸರಿತೋರಿದಂತೆ ನಡೆಯುವ ಸ್ವಭಾವವನ್ನು ರೂಢಿಸಿಕೊಂಡಿದ್ದ ಆನಿ ಬೆಸೆಂಟ್ ಈ ಅಸಮ್ಮತಿಯನ್ನು ಲಕ್ಷಿಸಲೇ ಇಲ್ಲ. ಬ್ರಾಡ್‌ಲಾರವರೊಡನೆ ಸೇರಿ ಅವರ ವಿವಿಧ ಕಾರ್ಯಕ್ರಮಗಳಲ್ಲಿ ಭಾಗಿಯಾದಳು. ಆತನ ಪರಿಚಯ

ಹೆಚ್ಚಿದಂತೆಲ್ಲಾ, ಆತನ ಘನತೆಯ ಅರಿವುಂಟಾದಂತೆಲ್ಲಾ ಆನಿ ಬೆಸೆಂಟ್‌ಳಿಗೆ ಬ್ರಾಡ್‌ಲಾರವರಲ್ಲಿ ಗೌರವ ಹೆಚ್ಚಾಯಿತು.

ಯಾವ ಕೆಲಸವೇ ಆಗಲೀ, ಅದನ್ನು ವಹಿಸಿಕೊಂಡ ಮೇಲೆ, ಅತ್ಯಂತ ಶ್ರದ್ಧೆಯಿಂದ ಆ ಕೆಲಸವನ್ನು ನಡೆಸುವುದು ಆನಿ ಬೆಸೆಂಟ್‌ಳ ಸ್ವಭಾವ ವಾಗಿತ್ತು. ಆಕೆಯ ಈ ಸ್ವಭಾವವೂ, ಕಾರ್ಯದಕ್ಷತೆಯೂ ಬ್ರಾಡ್‌ಲಾ ರವರ ಮೆಚ್ಚುಕೆಗೆ ಪಾತ್ರವಾದುವು. ಅವರು ಆಕೆಯನ್ನು ತಾವು ನಡೆಸು ತ್ತಿದ್ದ 'ನ್ಯಾಷನಲ್ ರಿಫಾರ್ಮರ್' ಪತ್ರಿಕೆಯ ಉಪಸಂಪಾದಕಳನ್ನಾಗಿ ನಿಯ ಮಿಸಿಕೊಂಡರು. ಕಾಲಕ್ರಮದಲ್ಲಿ ಆನಿ ಬೆಸೆಂಟ್ 'ನ್ಯಾಷನಲ್ ಸೆಕ್ಯುಲರ್ ಸೊಸೈಟಿ'ಯ ಉಪಾಧ್ಯಕ್ಷ ಸ್ಥಾನಕ್ಕೂ ಏರಿದಳು.

ಬ್ರಾಡ್‌ಲಾರವರ ಜೊತೆಯಲ್ಲಿದ್ದಾಗ, ಬೆಸೆಂಟ್ ಅನೇಕ ಉತ್ತಮ ಲೇಖನಗಳನ್ನು ಬರೆದಳು; ಭಾಷಣಗಳನ್ನು ಮಾಡಿದಳು; ಜನರ ಅಂಧಶ್ರದ್ಧೆ ಯನ್ನು ಮುರಿಯಲು, ಸ್ವತಂತ್ರ ವಿಚಾರ ಪ್ರವೃತ್ತಿಯನ್ನು ಪ್ರಚುರಪಡಿಸಲು ತುಂಬಾ ಶ್ರಮಿಸಿದಳು. ಈ ಸಂಬಂಧದಲ್ಲಿ ಆಕೆ ಮತ್ತು ಬ್ರಾಡ್‌ಲಾರವರ ಮೇಲೆ ನ್ಯಾಯಸ್ಥಾನದಲ್ಲಿ ಮೊಖದ್ದಮೆಗಳು ಹೂಡಲ್ಪಟ್ಟುವು. ಆದರೆ ಆನಿ ಬೆಸೆಂಟ್ ಈ ಮೊಖದ್ದಮೆಗಳನ್ನು ಧೈರ್ಯದಿಂದ ಇದಿರಿಸಿ, ತನ್ನ ಪರವಾಗಿ (ವಕೀಲರಿಲ್ಲದೆ) ತಾನೆ ವಾದಮಾಡಿ ಗೆದ್ದಳು. ಇದಲ್ಲದೆ, ಅವಳ ಸ್ವತಂತ್ರ್ಯ ಅಭಿಪ್ರಾಯಗಳಿಗಾಗಿ, ಅವಳ ವಿರೋಧಿಗಳು ಅವಳ ಭಾಷಣಗಳ ಕಾಲದಲ್ಲಿ ಅಡ್ಡಿ ಆತಂಕಗಳನ್ನುಂಟುಮಾಡಿ ಗೊಂದಲ ಮಾಡಿದಾಗ ಕೂಡ ಆನಿ ಬೆಸೆಂಟ್ ಅಪ್ರತಿಭಳಾಗದೆ, ಧೈರ್ಯದಿಂದ ಆ ಸನ್ನಿವೇಶಗಳನ್ನೆದುರಿಸಿ ಜನರ ಮೆಚ್ಚುಕೆಗೆ ಪಾತ್ರಳಾದಳು.

ಅವಳ ಈ ಚಟುವಟಿಕೆಗಳು ಫ್ರಾಂಕ್ ಬೆಸೆಂಟ್‌ನ ಕಣ್ಣು ಕೆರಳಿಸಿದವು. ಅವಳ ನಿರೀಶ್ವರವಾದ ಪ್ರಚಾರವನ್ನೇ ಕಾರಣಮಾಡಿಕೊಂಡು, ಅಂಥ ಮನೋವೃತ್ತಿಯುಳ್ಳ ವ್ಯಕ್ತಿಯೊಡನೆ ತನ್ನ ಮಗಳು ಬೆಳೆಯುವುದರಿಂದ ಅವಳೂ ನಿರೀಶ್ವರವಾದಿಯಾಗಬಹುದೆಂದೂ ಆದ್ದರಿಂದ ತನ್ನ ಮಗಳನ್ನು ಆಕೆಯ ರಕ್ಷಣೆಯಿಂದ ಬಿಡಿಸಿ ತನ್ನ ವಶಕ್ಕೆ ಕೊಡಿಸಬೇಕೆಂದೂ ನ್ಯಾಯಸ್ಥಾನ ದಲ್ಲಿ ವಾದ ಹೂಡಿದನು ಆನಿ ಬೆಸೆಂಟ್ ತನ್ನ ಗಂಡನ ವಿರುದ್ಧ ತಾನೇ ವಾದಿಸಿದಳು. ಆದರೂ ಆಕೆಯ ನಿರೀಶ್ವರವಾದ, ಸ್ವತಂತ್ರಮನೋಭಾವನೆ

ಗಳ ಬಗ್ಗೆ ವಿರೋಧ ತಳೆದಿದ್ದ ನ್ಯಾಯಧೀಶನು, ಮಗುವನ್ನು ಆನಿ ಬೆಸೆಂಟ್ಳಿಂದ ಒಡನೆಯೇ ಬೇರ್ಪಡಿಸಬೇಕೆಂದು ತೀರ್ಪು ಕೊಟ್ಟನು. ಈ ತೀರ್ಪು ಹೊರಬಿದ್ದದ್ದೇ ತಡ ಫ್ರಾಂಕ್ ಬೆಸೆಂಟ್‌ನ ಪ್ರತಿನಿಧಿ ಆನಿ ಬೆಸೆಂಟ್‌ಳ ಮನೆಗೆ ಬಂದನು. ದೀರ್ಘಕಾಲ ಜ್ವರದಿಂದ ನರಳಿ ನಿಶ್ಯಕ್ತವಾಗಿದ್ದ ಮಗು, ತಾನು ತಾಯಿಯನ್ನು ಬಿಟ್ಟುಬರುವುದಿಲ್ಲವೆಂದು ಎಷ್ಟು ಹಟ ಮಾಡಿದರೂ, ಅತ್ತರೂ, ರಚ್ಚೆಮಾಡಿದರೂ ಲಕ್ಷ್ಯಿಸದೆ, ಬಲಾತ್ಕಾರವಾಗಿ ಅದನ್ನು ಕೊಂಡೊಯ್ದನು.

ಈ ವಿಯೋಗ ಆನಿ ಬೆಸೆಂಟ್‌ಳ ಮೇಲೆ ತುಂಬಾ ತೀವ್ರ ಪರಿಣಾಮವನ್ನುಂಟುಮಾಡಿತು. ಸಹಿಸಲಾರದ ದುಃಖಭಾರದಿಂದ ಆಕೆಯ ಆರೋಗ್ಯ ಕೆಟ್ಟಿತು. ಅವಳು ಹಾಸುಗೆ ಹಿಡಿದು ಮಲಗಿದಳು. ಅವಳ ದೀನಸ್ಥಿತಿಯನ್ನು ಕಂಡು ತುಂಬಾ ಮರುಗಿದ ಬ್ರಾಡ್‌ಲಾರವರು ತಾವೇ ಆಕೆಯ ರಕ್ಷಣೆ ಪೋಷಣೆಗಳಿಗೆ ಗಮನಕೊಟ್ಟರು. ಅವರ ಸೇವೆ ಉಪಚಾರಗಳಿಂದ ಆನಿ ಬೆಸೆಂಟ್ ತನ್ನ ಖಾಯಿಲೆಯನ್ನು ಕಳೆದುಕೊಂಡು ಮತ್ತೆ ಆರೋಗ್ಯವಂತಳಾಗಿ ತನ್ನ ಕೆಲಸಕಾರ್ಯಗಳಿಗೆ ಮನಸ್ಸು ಕೊಡಲು ಸಮರ್ಥಳಾದಳು.

ಅಲ್ಲದೆ, ಸುಪ್ರಸಿದ್ಧ ವಿಜ್ಞಾನ ಬೋಧಕರಾದ ಎಡ್ವರ್ಡ್ ಬಿ. ಎವಿಲಿಂಗ್‌ರವರಲ್ಲಿ ವಿಜ್ಞಾನಕ್ಕೆ ಸಂಬಂಧಿಸಿದ ಎಂಟು ಬೇರೆ ಬೇರೆ ಶಾಸ್ತ್ರಗಳನ್ನು ಅಭ್ಯಾಸ ಮಾಡಿ ವಿಜ್ಞಾನಶಾಸ್ತ್ರದ ಬೋಧಕಳಾಗಲು ಅರ್ಹತೆಯನ್ನು ಪಡೆದಳು; ಲಂಡನ್ ವಿಶ್ವವಿದ್ಯಾಲಯದ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಕುಳಿತು ಅದರಲ್ಲೂ ಉತ್ತೀರ್ಣಳಾದಳು. ಬಿ.ಎಸ್‌ಸಿ. ಪರೀಕ್ಷೆಗೂ ಕುಳಿತುಕೊಳ್ಳಬೇಕೆಂಬ ಅಪೇಕ್ಷೆ ಆನಿ ಬೆಸೆಂಟ್‌ಗೆ ಇತ್ತು. ಆದರೆ, ಆಕೆ ಪರೀಕ್ಷೆಯಲ್ಲಿ ಎಷ್ಟು ಉತ್ತಮವಾಗಿ ಉತ್ತರ ಬರೆದರೂ, ನಿರೀಶ್ವರವಾದಿಯಾದ ಆಕೆ ಪರೀಕ್ಷೆಯಲ್ಲಿ ತೇರ್ಗಡೆಯಾಗದಂತೆ ಮಾಡುವುದಾಗಿ ವಿಶ್ವವಿದ್ಯಾಲಯದ ಅಧ್ಯಾಪಕನೊಬ್ಬನು ಪಣ ತೊಟ್ಟು ನಿಂತಿದ್ದರಿಂದ, ಆನಿ ತನ್ನ ಆ ಆಲೋಚನೆಯನ್ನು ಬಿಟ್ಟು ರಾಜಕೀಯ ಚಳವಳಿ, ಸಮಾಜ ಸೇವೆಗಳಿಗೂ ನಿರೀಶ್ವರವಾದ, ಸ್ವತಂತ್ರವಿಚಾರವಾದಗಳ ಪ್ರಚಾರಕ್ಕೂ ಮನಸ್ಸು ಕೊಟ್ಟಳು.

ತನ್ನ ದೃಷ್ಟಿಯನ್ನು ಬ್ರಿಟಿಷ್ ಪ್ರಜಾವರ್ಗದ ಹಿತಸಾಧನೆಗಾಗಿ ಮಾತ್ರ ಮೀಸಲಿಡದೆ, ಶೋಷಣೆ ದೌರ್ಜನ್ಯಗಳಿಗೊಳಗಾಗಿದ್ದ ಇತರ ದೇಶಗಳ ಕಡೆಗೂ ತಿರುಗಿಸಿದಳು. 'ನ್ಯಾಷನಲ್ ರಿಫಾರ್ಮರ್' ಪತ್ರಿಕೆಯಲ್ಲಿಯೂ, ಚಿಕ್ಕ ಚಿಕ್ಕ

ಪುಸ್ತಕಗಳ ಮೂಲಕವೂ ಇಂಡಿಯಾ, ಆಫ್‌ಘಾನಿಸ್ಥಾನ, ಟ್ರಾನ್ಸ್‌ವಾಲ್, ಈಜಿಪ್ಟ್, ಸೂಡಾನ್, ಐರ್ಲೆಂಡ್‌ಗಳ ಸ್ವಾತಂತ್ರ್ಯಸಮಸ್ಯೆಯನ್ನು ಕುರಿತು ಪ್ರಚಾರ ಮಾಡಿದಳು. ಈ ದೇಶಗಳು ಸ್ವತಂತ್ರವಾಗಬೇಕೆಂದು ವಾದಿಸಿದಳು.

ಈ ಹೊತ್ತಿಗೆ ಇಂಗ್ಲೆಂಡಿನಲ್ಲಿ ಸಮಾಜವಾದದ ಪ್ರಥಮ ಪ್ರಚಾರ ನಡೆದಿತ್ತು. ದೀನದಲಿತರ ಸಮಸ್ಯೆಯ ವಿವರಣೆ ಮತ್ತು ನಿವಾರಣೆಯಲ್ಲಿ ಸಮಾಜವಾದದ ನೆಲೆ ತಾರ್ಕಿಕವಾದುದೆಂದು ಆಕೆಗೆ ತೋರಿತು. ಈವರೆಗೂ ಆಕೆ ಆರ್ಥಿಕ ಸಮಸ್ಯೆಗಳ ಬಗ್ಗೆ ತೀವ್ರವಾಗಿ ಯೋಚಿಸಿರಲಿಲ್ಲ. ಸಮಾಜವಾದದ ಮತ್ತು ಸಮಾಜವಾದಿಗಳ ಪರಿಚಯವಾದಮೇಲೆ ಆನಿ ಬೆಸೆಂಟ್ ಈ ಹೊಸ ತತ್ವದ ಅಧ್ಯಯನಕ್ಕೆ ಮನಸ್ಸು ಕೊಟ್ಟಳು. ಈ ತತ್ವ ಅವಳನ್ನು ಆಕರ್ಷಿಸಿತು.

ಆದರೆ, ಬ್ರಾಡ್‌ಲಾರವರು ಸಮಾಜವಾದಿಗಳ ವಿರೋಧಿಗಳಾಗಿದ್ದರು. ಆದ್ದರಿಂದ ಆನಿ ಬೆಸೆಂಟ್ ಸಮಾಜವಾದವನ್ನೊಪ್ಪಿದ ಮೇಲೆ ಬ್ರಾಡ್‌ಲಾರವರ ಚಳವಳಿಯಿಂದ ದೂರವಾಗಬೇಕಾದುದು ಅನಿವಾರ್ಯವಾಯಿತು.

ಸಮಾಜವಾದವನ್ನು ಆಕೆ ತತ್ವತಃ ಒಪ್ಪಿದರೂ, ಸಾಮಾಜಿಕ ನ್ಯಾಯವನ್ನು ಗಳಿಸಲು ಹಿಂಸೆ, ವಿನಾಶ, ಕ್ರೌರ್ಯಾದಿ ಯಾವ ಮಾರ್ಗವನ್ನಾದರೂ ಅನುಸರಿಸಬಹುದೆಂದು ವಾದಿಸುತ್ತಿದ್ದ ಸಮತಾವಾದಿಗಳ ಕಾರ್ಯಕ್ರಮ ಆಕೆಗೆ ಸರಿತೋರಲಿಲ್ಲ. ಆದ್ದರಿಂದ ಆನಿ ಬೆಸೆಂಟ್ ಅಂಥ ತೀವ್ರ ಕಾರ್ಯಕ್ರಮಗಳಿಂದ ವಿಮುಖರಾಗಿದ್ದ 'ಫೆಬಿಯನ್' ಸಂಸ್ಥೆಯನ್ನು ಸೇರಿದಳು. ತಾನು ಹತ್ತು ವರ್ಷಗಳಿಂದ ಉಪಸಂಪಾದಕಳಾಗಿದ್ದ 'ನ್ಯಾಷನಲ್ ರಿಫಾರ್ಮರ್' ಪತ್ರಿಕೆಯ ಸಂಬಂಧವನ್ನು ಬಿಟ್ಟುಬಿಟ್ಟಳು.

ಈ ಕಾಲದಲ್ಲಿ ಆಕೆಗೆ ಡಬ್ಲ್ಯು.ಟಿ. ಸ್ಟೀಡ್, ಜಾರ್ಜ್ ಬರ್ನಾರ್ಡ್ ಷಾ, ಸಿಡ್ನಿ ವೆಬ್ ಮುಂತಾದವರ ಪರಿಚಯವಾಯಿತು. ಕೂಲಿಕಾರರ ಹಿತಚಿಂತನೆ ಆನಿ ಬೆಸೆಂಟ್‌ಳ ಪ್ರಥಮ ಕರ್ತವ್ಯವಾಯಿತು. ತನ್ನ ಕಾರ್ಯ ಕ್ಷೇತ್ರ ವಿಸ್ತಾರವಾದುದರಿಂದ, ಕಾರ್ಯ ನಿರ್ವಹಣೆಯ ದಕ್ಷತೆಯ ದೃಷ್ಟಿಯಿಂದ ಆಕೆ ಲಂಡನ್ನಿನ ಸುಪ್ರಸಿದ್ಧ ಫ್ಲೀಟ್ ಸ್ಟ್ರೀಟ್‌ನಲ್ಲಿ ತನ್ನ ಸ್ವಂತ ಕಛೇರಿಯನ್ನು ತೆರೆದಳು.

ಆನಿ ಬೆಸೆಂಟ್ ಸಮತಾವಾದಿಗಳೊಡನೆ ಸೇರಿಕೊಂಡು ಕೆಲಸಮಾಡುತ್ತಿ

ದ್ದಾಗ ನಡೆದ ಘಟನೆಗಳಲ್ಲಿ ಎರಡು ಬಹು ಮುಖ್ಯವಾದವು.

ಇವುಗಳಲ್ಲಿ ಟ್ರೆಫಾಲ್ಗರ್ ಚೌಕದ ಘಟನೆ ಮೊದಲನೆಯದು. ೧೮೮೭ರಲ್ಲಿ ಬ್ರಿಟನ್ನಿನ ಆರ್ಥಿಕಸ್ಥಿತಿ ಚೆನ್ನಾಗಿರಲಿಲ್ಲ. ಜನರಲ್ಲಿ ನಿರುದ್ಯೋಗ ಹೆಚ್ಚುತ್ತಿತ್ತು. ಆ ವರ್ಷ ಅಕ್ಟೋಬರ್ ತಿಂಗಳ ಹೊತ್ತಿಗೆ ಈ ಸಮಸ್ಯೆ ಉಲ್ಬಣಸ್ಥಿತಿಗೆ ಬಂತು. ನಿರುದ್ಯೋಗಿಗಳು ತಮ್ಮ ಸ್ಥಿತಿಗತಿಗಳನ್ನು ಜನರ ಗಮನಕ್ಕೆ ತರುವ ಉದ್ದೇಶದಿಂದ, ಲಂಡನ್ ನಗರದ ಬೀದಿಗಳಲ್ಲಿ ಮೆರವಣಿಗೆ ಹೊರಡಲು ಮೊದಲು ಮಾಡಿದರು. ಲಂಡನ್ನಿನ ಪೊಲೀಸ್ ಅಧಿಕಾರಿಗಳು ಇಂಥ ಪ್ರದರ್ಶನಗಳನ್ನು ಮೊಳಕೆಯಲ್ಲಿಯೇ ಮುರಿಯಬೇಕೆಂದು ನಿರ್ಧರಿಸಿ ಪ್ರದರ್ಶನಕಾರರ ಮೇಲೆ ತೀವ್ರವಾದ ದಬ್ಬಾಳಿಕೆಯನ್ನಾರಂಭಿಸಿದರು. ಜನರ ಗುಂಪನ್ನು ಚೆದುರಿಸುವ ನೆಪದಲ್ಲಿ ನೆರೆದಿದ್ದ ಜನರ ಮೇಲೆ ಅತ್ಯಾಚಾರ ನಡೆಸಲು ಮೊದಲಿಟ್ಟರು. ಈ ಘಟನೆಗಳಿಂದಾಗಿ ಜನರ ಮತ್ತು ಪೊಲೀಸರ ನಡುವೆ ದ್ವೇಷಭಾವನೆಯೂ ಘರ್ಷಣೆಯೂ ಬೆಳೆಯಿತು. ಈ ಚಳವಳಿಯನ್ನು ಮುರಿಯುವ ಉದ್ದೇಶದಿಂದ ಪೊಲೀಸರು ತಮ್ಮ ಕೈಗೆ ಸಿಕ್ಕಿದ ಬಡಬಗ್ಗರನ್ನು ಹಿಡಿದು ಅವರ ಮೇಲೆ ಮೊಖದ್ದಮೆಗಳನ್ನು ಹಾಕಿ ಶಿಕ್ಷೆಗೆ ಗುರಿಮಾಡಲಾರಂಭಿಸಿದರು.

ಈ ಅನ್ಯಾಯವನ್ನೆದುರಿಸುವ ದೃಷ್ಟಿಯಿಂದ ಆನಿ ಬೆಸೆಂಟ್ ಮತ್ತು ಸ್ಟೀಡ್‌ರವರು ಸೇರಿ "ಸೋಷಿಯಲಿಸ್ಟ್ ಡಿಫೆನ್ಸ್ ಅಸೋಸಿಯೇಷನ್" ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಪೊಲೀಸರ ಅನ್ಯಾಯ ಕಾರ್ಯಾಚರಣೆಗೆ ಗುರಿಯಾದವರಿಗ ಜಾಮೀನು ಒದಗಿಸುವ ಮತ್ತು ನ್ಯಾಯಸ್ಥಾನದಲ್ಲಿ ಅವರ ಪರವಾಗಿ ವಕೀಲಿ ನಡೆಸುವ ಕಾರ್ಯವನ್ನು ವ್ಯವಸ್ಥೆಮಾಡಿದರು.

ಈ ವ್ಯವಸ್ಥೆ ಪೊಲೀಸರನ್ನು ಇನ್ನಷ್ಟು ರೊಚ್ಚಿಗೆಬ್ಬಿಸಿತು. ತಮ್ಮನ್ನು ಈ ರೀತಿ ಇದಿರಿಸುತ್ತಿದ್ದವರಿಗೆ ಮರೆಯಲಾರದ ಪಾಠ ಕಲಿಸಬೇಕೆಂದು ಅವರು ನಿರ್ಣಯಿಸಿಕೊಂಡರೆಂದು ತೋರುತ್ತದೆ. ಅದಕ್ಕೆ ಪೀಠಿಕೆಯಾಗಿ ನವೆಂಬರ್ ೯ನೇ ತಾರೀಖಿನ ದಿನ ಲಂಡನ್ನಿನ ಪ್ರಧಾನ ಪೊಲೀಸ್ ಅಧಿಕಾರಿಗಳು ನಗರದಲ್ಲಿ ಯಾವ ವಿಧವಾದ ಸಭೆಯೂ ನಡೆಯಕೂಡದೆಂದು ಆಜ್ಞೆ ಹೊರಡಿಸಿದರು. ಆದರೆ, ಬ್ರಿಟಿಷ್ ಸರ್ಕಾರದ ಗೃಹಸಚಿವರು ಇಂಥ ಆಜ್ಞೆಗಳು ರಾಜಕೀಯ ಸಭೆಗಳಿಗೆ ಅನ್ವಯಿಸುವುದಿಲ್ಲವೆಂದು ಹೇಳಿದ್ದರಾಗಿ, ಮೆಟ್ರೋ

ಪೊಲಿಟನ್ ರ್‍ಯಾಡಿಕಲ್ ಫೆಡರೇಷನ್‌ರವರು ಗೃಹಸಚಿವರ ಮಾತಿನ ಮೇಲೆ ಭರವಸೆಯಿಟ್ಟು ನವೆಂಬರ್ ೧೩ನೇ ತಾರೀಖಿನ ದಿವಸ ಟ್ರೆಫಾಲ್‌ಗರ್ ಚೌಕದಲ್ಲಿ ಒಂದು ಸಭೆ ನಡೆಸಲು ನಿರ್ಧರಿಸಿದರು. ರಾಜಕೀಯ ಚಳವಳಿಕಾರರಾದ ಓ'ಬ್ರೈನ್‌ರವರ ಬಂಧನವನ್ನು ವಿರೋಧಿಸುವುದೇ ಸಭೆಯ ಉದ್ದೇಶವೆಂದು ಕೂಡ ಪ್ರಕಟವಾಗಿತ್ತು.

ಹನ್ನೆರಡನೆಯ ತಾರೀಖು ಸಂಜೆ, ಮಾರನೆಯ ದಿನದ ಮೆರವಣಿಗೆ ಮತ್ತು ಸಭೆಗಾಗಿ ಎಲ್ಲ ವ್ಯವಸ್ಥೆಯಾದಮೇಲೆ ಪೊಲೀಸ್ ಮುಖ್ಯಾಧಿಕಾರಿಗಳು ಒಮ್ಮಿಂದೊಮ್ಮೆ ಟ್ರೆಫಾಲ್‌ಗರ್ ಚೌಕದ ಸುತ್ತಮುತ್ತಿನ ಪ್ರದೇಶದಲ್ಲೆಲ್ಲೂ ಮೆರವಣಿಗೆ ನಡೆಯಕೂಡದೆಂದು ಇನ್ನೊಂದು ಹೊಸ ಆಜ್ಞೆಯನ್ನು ಹೊರಡಿಸಿದರು.

ಈ ಆಜ್ಞೆ ಹೊರಟೊಡನೆಯೇ ವಿವಿಧ ಸಮಾಜವಾದಿ ಸಂಘಗಳ ಪ್ರತಿನಿಧಿಗಳು ಸಭೆಸೇರಿ, ಪರಿಸ್ಥಿತಿಯನ್ನು ಸಾವಧಾನವಾಗಿ ವಿವೇಚಿಸಿ, ಪೊಲೀಸರ ದಬ್ಬಾಳಿಕೆಯನ್ನು ನಿರೋಧಿಸಲೇಬೇಕೆಂದೂ, ನಿಷೇಧಾಜ್ಞೆಗೆ ಒಳಪಟ್ಟದ್ದ ಪ್ರದೇಶಗಳ ಮೂಲಕ ಟ್ರೆಫಾಲ್‌ಗರ್ ಚೌಕಕ್ಕೆ ಮೆರವಣಿಗೆ ತೆಗೆದುಕೊಂಡು ಹೋಗಿ, ಅಲ್ಲಿ ಸಭೆಯನ್ನು ನಡೆಸಲೇಬೇಕೆಂದೂ ತೀರ್ಮಾನಿಸಿದರು. ಇದಲ್ಲದೆ ಬಹಿರಂಗ ಸಭೆಗಳನ್ನು ನಡೆಸುವುದಕ್ಕಿರುವ ಆತಂಕಗಳು ನಿವಾರಣೆಯಾಗುವವರೆಗೆ ಪ್ರತಿ ಭಾನುವಾರವೂ ಟ್ರೆಫಾಲ್‌ಗರ್ ಚೌಕದಲ್ಲಿ ಬಹಿರಂಗ ಸಭೆ ನಡೆಸಿಯೇತೀರಬೇಕೆಂದು ಕೂಡ ನಿರ್ಧರಿಸಿದರು.

ಪ್ರತಿನಿಧಿಗಳ ನಿರ್ಣಯದಂತೆ ನಾನಾ ಕೇಂದ್ರಗಳಿಂದ ಮೆರವಣಿಗೆಗಳು ಹೊರಟು ಟ್ರೆಫಾಲ್‌ಗರ್ ಚೌಕದ ಕಡೆಗೆ ನಡೆದುವು. ಆನಿ ಬೆಸೆಂಟ್ ನಾಯಕತ್ವದಲ್ಲೂ ಒಂದು ತಂಡ ಹೊರಟಿತು. ಈ ಗುಂಪು ಒಂದು ಇಕ್ಕಟ್ಟಾದ ಪಕ್ಕದ ಬೀದಿಯ ಮೂಲಕ ಚೌಕವನ್ನು ಪ್ರವೇಶಿಸಬೇಕಾಗಿತ್ತು. ಮೆರವಣಿಗೆ ಶಾಂತವಾಗಿ ಶಿಸ್ತಿನಿಂದ ಚಲಿಸುತ್ತಿತ್ತು. ಪೊಲೀಸರು ಅದರ ತಂಟೆಗೆ ಬರುವುದೇ ಇಲ್ಲವೇನೋ ಎಂಬಂತೆ ತೋರಿತು. ಏಕೆಂದರೆ ಹತ್ತಿರದಲ್ಲಿ ಪೊಲೀಸರು ಯಾರೂ ಕಾಣಿಸಲಿಲ್ಲ. ಆದರೆ ಮೆರವಣಿಗೆ ಪೂರ್ತಿಯಾಗಿ ಓಣಿಯನ್ನು ಪ್ರವೇಶಿಸಿದೊಡನೆಯೇ ಪೊಲೀಸರು ಗುಂಪಿಗೆ ಯಾವ ಎಚ್ಚರಿಕೆಯನ್ನೂ ಕೊಡದೆ, ಥಟ್ಟನೆ ಗಲ್ಲಿಯೊಳಕ್ಕೆ ನುಗ್ಗಿ ಮೆರವಣಿಗೆಯ ಮೇಲೆ ಬಿದ್ದು

ಲಾಠಿ ಪ್ರಯೋಗವನ್ನಾರಂಭಿಸಿದರು. ಗಂಡಸರು ಹೆಂಗಸರೆಂದು ನೋಡದೆ ತಮ್ಮ ಕೈಗೆ ಸಿಕ್ಕಿದವರನ್ನು ಹೊಡೆದು ಕೆಡವಿದರು. ಇದರಿಂದಾಗಿ ಮೆರವಣಿಗೆ ಚದರಿತು. ಬಲವಾಗಿ ಏಟು ತಿಂದು ನೆಲಕ್ಕೆ ಬಿದ್ದು ಏಳಲಾರದಷ್ಟು ಗಾಯ ಗೊಂಡಿದ್ದವರು ಅಲ್ಲಿಯೇ ಬಿದ್ದಿದ್ದರು. ಇತರರು ಒಬ್ಬರು ಇಬ್ಬರಾಗಿ ಅಲ್ಲಲ್ಲಿ ನುಸುಳಿಕೊಂಡು ಚೌಕಕ್ಕೆ ಬಂದರು. ಆ ಹೊತ್ತಿಗಾಗಲೇ ಪೊಲೀಸರು ಚೌಕವನ್ನು ಸುತ್ತುಗಟ್ಟಿ ನಿಂತಿದ್ದರು. ಜನರು ಅವರ ಮೇಲೆ ನಿರ್ದಿಷ್ಟವಾಗಿ ದಾಳಿ ಮಾಡಿದ ಹೊರತು, ಆ ಪೊಲೀಸ್ ವ್ಯೂಹವನ್ನು ಛೇದಿಸಿ ಮುಂದು ವರೆಯುವಂತಿರಲಿಲ್ಲ. ಮೆರವಣಿಗೆ ಮತ್ತು ಪ್ರದರ್ಶನದಲ್ಲಿ ಭಾಗವಹಿಸಿರುವ ಯಾರೇ ಆಗಲಿ ಯಾವ ವಿಧವಾದ ಹಿಂಸಾತ್ಮಕಕಾರ್ಯದಲ್ಲೂ ತೊಡಗಬಾರ ದೆಂದು ಪ್ರತಿನಿಧಿಗಳು ಕಟ್ಟಪ್ಪಣೆ ಮಾಡಿದ್ದರು. ಆದರಿಂದ ಜನರು ಯಾರೂ ಪೊಲೀಸಿನವರ ಮೇಲೆ ಬೀಳಲು ಪ್ರಯತ್ನಿಸಲಿಲ್ಲ. ಎರಡೂ ಪಕ್ಷಗಳೂ ಹೀಗೆ ಸ್ವಲ್ಪ ಹೊತ್ತು ಸ್ತಬ್ಧವಾಗಿದ್ದುವು. ಹೀಗೆ ಎಷ್ಟು ಹೊತ್ತಿರಲು ಸಾಧ್ಯ? ಕನ್ನಿಂಗ್‌ಹ್ಯಾಮ್ ಗ್ರಹ್ಯಾಂ ಮತ್ತು ಜಾನ್‌ಬರ್ನ್ಸ್ ಎಂಬಿಬ್ಬರು ಕೈ ಕೈ ಹಿಡಿದುಕೊಂಡು ಜೊತೆಗಾಗಿ ಗುಂಪಿನಿಂದ ಮುಂದೆ ಬಂದು ಪೊಲೀಸ್ ಪಂಕ್ತಿಯನ್ನು ದಾಟಿಹೋಗಲು ಪ್ರಯತ್ನಿಸಿದರು. ಪೊಲೀಸರಿಗೆ ಅಷ್ಟೇ ಕಾರಣ ಸಾಕಾಯಿತು. ಅವರಿಬ್ಬರಿಗೂ ತಲೆಯ ಮೇಲೆ ಬಲವಾದ ಪೆಟ್ಟು ಹಾಕಿ, ಸೆರೆಹಿಡಿದರು; ಅದಿಷ್ಟರಿಂದಲೇ ತೃಪ್ತರಾಗದೆ, ಜನರನ್ನು ಸದೆ ಬಡಿಯುವ ಕಾರ್ಯಕ್ರಮವನ್ನು ಕೈಗೊಂಡರು. ಕುದುರೆ ಹತ್ತಿದ್ದ ಪೊಲೀಸರ ಪಡೆ ಗುಂಪುಗುಂಪಾಗಿ, ಜನಸಂದಣಿಯ ಮೇಲೆ ನುಗ್ಗಿತು. ಕಟ್ಟು ಹರಿದ ಬೇಲದಕಾಯಿ ಮೂಟೆಯಂತೆ ಜನ ಚೌಕದ ತುಂಬಾ ಚಲ್ಲಾಪಿಲ್ಲಿಯಾಗಿ ಉರುಳಿದರು. ಹೀಗೆ ನೆಲಕ್ಕುರುಳಿದವರನ್ನು ಕೂಡ ಪೊಲೀಸರು ಸುಮ್ಮನೆ ಬಿಡಲಿಲ್ಲ. ಪಾದಚಾರಿ ಪೊಲೀಸರು ಒಡನೆಯೇ ಈ ಜನರ ಮೇಲೆ ಲಾಠಿ ಪ್ರಯೋಗ ಮಾಡಿದರು! ಜನ ಅವರನ್ನು ಸುತ್ತಗಟ್ಟಿದರು. ಪೊಲೀಸರು ಹಿಂದೆ ಮುಂದೆ ನೋಡದೆ ಅವರನ್ನು ಬಡಿದರು!

ಈ ಹಿಂಸಾತ್ಮಕ ದೃಶ್ಯವನ್ನು ನೋಡುತ್ತಿರುವುದು ಆನಿ ಬೆಸೆಂಟ್‌ಗೆ ಸಾಧ್ಯವಾಗಲಿಲ್ಲ. ಕುದುರೆ ಪೊಲೀಸರು ಮತ್ತೆ ಜನರ ಮೇಲೆ ದಾಳಿ ಮಾಡುವುದನ್ನಾದರೂ ತಪ್ಪಿಸೋಣವೆಂದು, ಆಕೆ ಒಂದು ಗಾಡಿಯನ್ನು

ಹತ್ತಿ, ಅದನ್ನು ಪೋಲೀಸು ಕುದುರೆಗಳು ಬರುವ ದಾರಿಗೆ ಅಡ್ಡವಾಗಿ ನಿಲ್ಲಿಸು ವಂತೆ ಗಾಡಿಯವನನ್ನು ಕೇಳಿಕೊಂಡಳು. ಅವನು ಹಾಗೆ ಮಾಡದೆ ಬೇರೆಯ ಕಡೆಗೆ ತನ್ನ ಗಾಡಿಯನ್ನೋಡಿಸಿದನು. ಒಡನೆಯೇ ಆಕೆ ಗಾಡಿಯಿಂದ ಧುಮಿಕಿ ಮತ್ತೆ ಚೌಕಕ್ಕೆ ಬಂದಳು.

ಸ್ವಲ್ಪ ಹೊತ್ತಿನಮೇಲೆ ಸೈನ್ಯದ ಕುದುರೆ ದಳ ಬಂತು. ಅದು ಜನರ ಮೇಲೆ ದಾಳಿ ಮಾಡದೆ ಸೌಮ್ಯವಾಗಿ ಅವರನ್ನು ಚದರಿಸಲು ಪ್ರಯತ್ನ ಪಟ್ಟಿತು. ಆದರೆ ಅದರ ಹಿಂದೆ ಬಂದೂಕದ ಸೇನೆಯ ತುಕ್ಕಡಿಯೊಂದು ಬಂದು ಚೌಕದ ಉತ್ತರಭಾಗದಲ್ಲಿ ನಿಂತಿತು. ಮತ್ತೇನಾದರೂ ತಾಕಲಾಟ ವಾದರೆ, ಸೇನೆಯವರು ಜನರ ಮೇಲೆ ಗುಂಡು ಹಾರಿಸುವರೆಂಬುದೂ, ಅದರಿಂದಾಗಿ, ಅನೇಕರು ಸಾಯುವರೆಂಬುದೂ ಖಚಿತವಾಯಿತು. ಅಂಥ ದುರಂತಕ್ಕೆಡೆಗೊಡಬಾರದೆಂದು, ಆನಿ ಬೆಸೆಂಟ್ ಮತ್ತು ಇತರ ಮುಖಂಡರು ನಿರ್ಧರಿಸಿ, ಮನೆಗೆ ಹೊರಟು ಹೋಗುವಂತೆ ಜನರಿಗೆ ಸೂಚನೆ ಕೊಟ್ಟರು. ಅವರು ತಮ್ಮ ನಾಯಕರ ಸೂಚನೆಯನ್ನನುಸರಿಸಿ ಹೊರಟು ಹೋದರು.

ಆದರೆ ಪ್ರಸಂಗ ಇಷ್ಟಕ್ಕೇ ನಿಲ್ಲಲಿಲ್ಲ. ಪೋಲೀಸರು ತಮ್ಮ ಕೈಗೆ ಸಿಕ್ಕಿ ಸಿಕ್ಕಿದವರನ್ನು — ಏಟು ಬಿದ್ದವರು, ಬೀಳದವರು ಎಲ್ಲರನ್ನೂ—ಹೆಚ್ಚು ಸಂಖ್ಯೆಯಲ್ಲಿ ಹಿಡಿದುಕೊಂಡು ಹೋಗಿ ಅವರ ಮೇಲೆ ಪೋಲೀಸ್ ನ್ಯಾಯ ಸ್ಥಾನದಲ್ಲಿ ಮಾರನೆಯ ದಿನವೇ ಮೊಖದ್ದಮೆಗಳನ್ನು ಹೂಡಿ, ಆಗಿಂದಾಗಲೇ ಶಿಕ್ಷೆ ಕೊಡಿಸಿ ಸೆರೆಮನೆಗೆ ಸೇರಿಸಿದರು! ಪಾಪ! ಎಂದೂ ನ್ಯಾಯಸ್ಥಾನದ ಮುಖ ಕಾಣದಿದ್ದ, ಎಂದೂ ಯಾವ ತಪ್ಪೂ ಮಾಡದಿದ್ದ ಸಭ್ಯ ಕೆಲಸಗಾರ ರೆಷ್ಟೋಮಂದಿ ತಮ್ಮ ನಿರಪರಾಧಿತ್ವವನ್ನು ವಾದಿಸಲು ಕೂಡ ಅವಕಾಶವಿಲ್ಲದೆ ಈ ರೀತಿ ಸೆರೆ ಸೇರಬೇಕಾಯಿತು. ಈ ಅನ್ಯಾಯವನ್ನು ತಪ್ಪಿಸು ವುದಕ್ಕಾಗಿ ಸ್ಟೀಡ್ ಮತ್ತು ಆನಿ ಬೆಸೆಂಟ್ ತುಂಬಾ ಶ್ರಮಿಸಿದರು. ಅನ್ಯಾಯವಾಗಿ ಸೆರೆ ಪಾಲಾಗಿದ್ದವರನ್ನು ಸೆರೆಯಿಂದ ಬಿಡಿಸಲು ಹೋರಾಡಿ ದರು; ಅಂಥವರಿಗೆ ನೆರವುಕೊಡಲು ಒಂದು ನಿಧಿಯನ್ನು ಕೂಡಿಸಿದರು; ಜಾಮೀನು ಕೊಡಲು ನೂರಾರು ಮಂದಿ ಗಣ್ಯರು ಮುಂದೆ ಬರುವಂತೆ ವ್ಯವಸ್ಥೆ ಮಾಡಿದರು. ಅವರ ಈ ಪ್ರಯತ್ನದ ಫಲವಾಗಿ ಅನ್ಯಾಯವಾಗಿ ಸೆರೆಗೀಡಾಗಿದ್ದ ಅನೇಕರಿಗೆ ಬಿಡುಗಡೆಯಾಯಿತು. ಹೀಗೆ ಬಿಡುಗಡೆಯಾದವ

ರನ್ನು ಅನಿ ಬೆಸೆಂಟ್ ತಾನೇ ಇದಿರುಗೊಂಡು, ದೀನಸ್ಥಿತಿಯಲ್ಲಿದ್ದವರಿಗೆ ಊಟ ಬಟ್ಟೆ ಬರೆಗಳನ್ನು ಕೊಡಿಸಿ ಅವರವರ ಸ್ಥಳಕ್ಕೆ ಹಿಂದಕ್ಕೆ ಕಳುಹಿಸಿದಳು.

ಈ ಸಂದರ್ಭದಲ್ಲಿ ಅನಿ ಬೆಸೆಂಟ್ ಮಾಡಿದ ಅಮೋಘ ಸೇವಾಕಾರ್ಯ ಎಲ್ಲರ ಪ್ರಶಂಸೆಗೆ ಪಾತ್ರವಾಯಿತು. ಸಮತಾವಾದಿಗಳ ತತ್ವ, ಕಾರ್ಯಕ್ರಮ ಗಳೆರಡನ್ನೂ ಒಪ್ಪದೆ ಅವರಿಗೆ ವಿರೋಧಿಗಳಾಗಿದ್ದ ಬ್ರಾಡ್‌ಲಾರವರು ಕೂಡ ಆಕೆಯ ಸೇವೆಯನ್ನು ಬಹಿರಂಗವಾಗಿ ಕೊಂಡಾಡಿದರು. ಬ್ರಾಡ್‌ಲಾರವರ ಹಿರಿಮೆಯೇ ಅದು. ತತ್ವವಿಚಾರದಲ್ಲಿ ತಮಗೆ ವಿರೋಧಿಗಳಾಗಿದ್ದವರ ಕೂಡ ಒಳ್ಳೆಯ ಕೆಲಸಮಾಡಿದಾಗ, ಆ ಬಗ್ಗೆ ಅವರು ತಮ್ಮ ಮೆಚ್ಚುಕೆಯನು ತೋರಿಸದೆ ಇರುತ್ತಿರಲಿಲ್ಲ.

ಅನಿ ಬೆಸೆಂಟ್ ಮತ್ತು ಸ್ಟೀಡ್‌ರವರು ನಡೆಸಿದ ಟ್ರಫಾಲ್‌ಗರ್ ಚೌಕದ ಚಳವಳಿಯಿಂದ, ಬಹಿರಂಗ ಸಭೆಗಳನ್ನು ನಡೆಸುವ ಸ್ವಾತಂತ್ರ್ಯ ತಮ್ಮ ಮೂಲಭೂತ ಹಕ್ಕುಗಳಲ್ಲಿ ಒಂದೆನ್ನುವುದರ ಅರಿವು ಬ್ರಿಟನ್ನಿನ ಜನರಲ್ಲಿ ಉಂಟಾಯಿತಲ್ಲದೆ, ಜನರ ಈ ಹಕ್ಕನ್ನು ಭಂಗಗೊಳಿಸುವುದು ಹಿತಕಾರಿಯಲ್ಲವೆಂಬುದು ಸರ್ಕಾರಕ್ಕೆ ಖಚಿತವಾಯಿತು. ಅವರು ಈ ಬಗ್ಗೆ ತಮ್ಮ ನೀತಿಯನ್ನು ತಿದ್ದಿಕೊಂಡರು.

ಸಮತಾವಾದಿಗಳೊಡನೆ ಸೇರಿ ಕೆಲಸ ಮಾಡುತ್ತಿದ್ದಾಗ ಅನಿ ಬೆಸೆಂಟ್ ಸಾಧಿಸಿದ ಇನ್ನೊಂದು ಮಹತ್ವದ ಕೆಲಸವೆಂದರೆ: ಲಂಡನ್ನಿನ ಬೆಂಕಿ ಪೆಟ್ಟಿಗೆ ಕಾರ್ಖಾನೆಯ ಕೆಲಸಗಾರರ ಸ್ಥಿತಿಗಳನ್ನು ಉತ್ತಮಗೊಳಿಸಿದ್ದು.

ಬ್ರಯಾಂಟ್ ಮತ್ತು ಮೇ ಕಂಪೆನಿಯವರಿಗೆ ಸೇರಿದ್ದ ಈ ಕಾರ್ಖಾನೆ ಯಲ್ಲಿ ಕೆಲಸಮಾಡುತ್ತಿದ್ದವರಲ್ಲಿ ಬಹು ಮಂದಿ ಹೆಣ್ಣುಮಕ್ಕಳು. ಇವರಿಗೆ ಕೊಡುತ್ತಿದ್ದ ಕೂಲಿ ತುಂಬಾ ಕಡಿಮೆಯಾಗಿತ್ತಲ್ಲದೆ, ಕಾರ್ಖಾನೆಯ ಗಂಧಕಮಿಶ್ರಿತ ವಾತಾವರಣದಿಂದ ಈ ಕೆಲಸಗಾರರ ಆರೋಗ್ಯವು ಕೆಡುತ್ತಿತ್ತು. ಈ ಅಪಾಯದಿಂದ ಕೆಲಸಗಾರರನ್ನು ರಕ್ಷಿಸಲು ಕಂಪೆನಿಯವರು ಯಾವ ಮುಂಜಾಗರೂಕತೆಯ ಕಾರ್ಯಕ್ರಮಗಳನ್ನೂ ಕೈಗೊಂಡಿರಲಿಲ್ಲ. ಇದಲ್ಲದ್ದೆ ಈ ಕೆಲಸಗಾರರು ತಮ್ಮ ಸ್ಥಿತಿಗತಿಗಳನ್ನು ಉತ್ತಮಗೊಳಿಸಿಕೊಳ್ಳಲು ಪ್ರಯತ್ನಿಸಿದಾಗಲೆಲ್ಲಾ ಕಂಪನಿಯ ಆಡಳಿತಗಾರರು ಅವರಿಗೆ ಬೆದರಿಕೆಗಳನು ಹಾಕಿ ಅವರ ಬಾಯಿ ಮುಚ್ಚಿಸುತ್ತಿದ್ದರು. ಹೀಗಾಗಿ ಆ ದೀನ ಹೆಣ್ಣುಮಕ್ಕಳು

ಮರುಮಾತಿಲ್ಲದೆ, ಕಷ್ಟ ಅವಮಾನಗಳನ್ನು ಸಹಿಸಿಕೊಂಡು ಕೆಲಸ ಮಾಡ ಬೇಕಾಗಿತ್ತು. ವಾಸ್ತವವಾಗಿ, ತಮಗೆ ಬೆಂಬಲ ಕೊಡುವವರು ಯಾರೂ ಇಲ್ಲವೆಂದು ಆ ಕೆಲಸಗಾರರು ಹತಾಶರಾಗಿದ್ದರು.

ಇಂಥ ಸ್ಥಿತಿಯಲ್ಲಿ ಆನಿ ಬೆಸೆಂಟ್ ಈ ಹೆಣ್ಣುಮಕ್ಕಳ ದಾರುಣ ಸ್ಥಿತಿ ಯನ್ನರಿತು, ತಾವೂ ಸ್ಟೀಡ್‌ರವರೂ ನಡೆಸುತ್ತಿದ್ದ 'ಲಿಂಕ್' ಪತ್ರಿಕೆಯಲ್ಲಿ ಆ ಬೆಂಕಿಪೆಟ್ಟಿಗೆ ಕಾರ್ಖಾನೆಯ ಕೆಲಸಗಾರರ ಅಧ್ವಾನ ಸ್ಥಿತಿಯನ್ನು ಬಯಲಿಗೆಳೆದು ಸಾರ್ವಜನಿಕರ ದೃಷ್ಟಿಯನ್ನು ಆ ಸಮಸ್ಯೆಯ ಕಡೆಗೆ ತಿರುಗಿಸಿ ದಳು. ಆಮೇಲೆ, ಆ ಕಾರ್ಖಾನೆಯಲ್ಲಿ ಒಂದು ಕೆಲಸಗಾರರ ಸಂಘವನ್ನು ಕಟ್ಟಿ ಅದಕ್ಕೆ ತಾನೇ ಗೌರವ ಕಾರ್ಯದರ್ಶಿಯಾಗಿ ನಿಂತು, ಅದನ್ನು ಬಲಪಡಿ ಸಿದಳು. ತಮ್ಮ ಸ್ಥಿತಿಗತಿಗಳನ್ನು ಉತ್ತಮಗೊಳಿಸಿಕೊಳ್ಳಲು ಆ ಕಾರ್ಖಾನೆಯ ಕೆಲಸಗಾರರು ಮುಷ್ಕರ ಹೂಡಿದಾಗ ಅವರ ಸಹಾಯಕ್ಕಾಗಿ ನಿಧಿಯನ್ನು ಕೂಡಿಸಿ, ಆ ಮುಷ್ಕರ ಯಶಸ್ವಿಯಾಗುವಂತೆ ಶ್ರಮಿಸಿದಳು. ಈ ಒಂದು ಮುಷ್ಕರದ ಪರಿಣಾಮವನ್ನು ನೋಡಿದ ಇತರ ಕಾರ್ಖಾನೆಗಳವರು ತಾವಾಗಿ ತಮ್ಮ ಕೆಲಸಗಾರರ ಸ್ಥಿತಿಗತಿಗಳನ್ನು ಉತ್ತಮಗೊಳಿಸಿದರು.

ಈ ಎರಡು ಮಹತ್ಕಾರ್ಯಗಳಲ್ಲದೆ, ಈ ಅವಧಿಯಲ್ಲಿ ಆನಿ ಬೆಸೆಂಟ್ ಇನ್ನೂ ಅನೇಕ ಪ್ರಜಾಹಿತ ಕಾರ್ಯಗಳನ್ನು ಸಾಧಿಸಿದಳು. ಲಂಡನ್ ಸ್ಕೂಲ್ ಬೋರ್ಡ್ ಸದಸ್ಯಸ್ಥಾನದಿಂದ ಆಕೆ ಚಿಕ್ಕ ಮಕ್ಕಳ ಹಿತವನ್ನುದ್ದೇಶಿಸಿದ ಸುಧಾರಣೆಗಳು ಆಚರಣೆಗೆ ಬರುವಂತೆ ಮಾಡಿದಳು. ಸರ್ಕಾರದ ವಿವಿಧ ಇಲಾಖೆಗಳು ತಮಗೆ ಬೇಕಾದ ಪದಾರ್ಥಗಳನ್ನು ಕೆಲಸಗಾರರ ಸಂಘಗಳು ಒಪ್ಪಿರುವ ನಿಯಮಗಳಿಗೊಳಪಟ್ಟು ಕೆಲಸನಡೆಸುವ ಕಾರ್ಖಾನೆಗಳಿಂದ ಮಾತ್ರ ಕೊಳ್ಳಬೇಕೆಂಬ ತತ್ವವನ್ನು ಆಡಳಿತದವರು ಒಪ್ಪುವಂತೆ ಮಾಡಿದಳು. ಕೆಲಸಗಾರರು ವಾಸಿಸುತ್ತಿದ್ದ ಸ್ಥಳಗಳಿಗೆ ಹೋಗಿ ಅವರು ಅನುಭವಿಸುತ್ತಿದ್ದ ಕಷ್ಟ ತೊಂದರೆ ಹಿಂಸೆಗಳನ್ನು ಕಣ್ಣಾರೆ ಕಂಡು ಅವುಗಳ ಪರಿಹಾರಕ್ಕಾಗಿ ಶ್ರಮಿಸಿದಳು. ಹೀಗೆ ನಾನಾ ಮುಖಗಳಲ್ಲಿ ಜನಸೇವೆಯನ್ನು ಮಾಡಿ ಜನರ ಪ್ರೀತಿಗೂ ಕೃತಜ್ಞತೆಗೂ ಪಾತ್ರಳಾದಳು. ಬ್ರಿಟನ್ನಿನ ಕಾರ್ಮಿಕ ಚಳವಳಿಯ ಇತಿಹಾಸದಲ್ಲಿ ತನಗೊಂದು ಸ್ಥಾನವನ್ನು ಗಳಿಸಿಕೊಂಡಳು.

೯

ಈ ಹೊತ್ತಿಗೆ ಆನಿ ಬೆಸೆಂಟ್‌ಗೆ ನಲವತ್ತು ವರ್ಷ ತುಂಬಿತ್ತು. ಆಕೆ ಸಾರ್ವಜನಿಕ ಸೇವಾ ಕ್ಷೇತ್ರವನ್ನು ಪ್ರವೇಶಿಸಿದಾಗ ಅವಳಿಗೆ ಇಪ್ಪತ್ತಾರು ಇಪ್ಪತ್ತೇಳು ವರ್ಷ ವಯಸ್ಸಾಗಿತ್ತು. ಹದಿನಾಲ್ಕು ಹದಿನೈದು ವರ್ಷಗಳ ಕಾಲದಲ್ಲಿ ಆಕೆ ಬ್ರಿಟನ್ನಿನ ಸಾರ್ವಜನಿಕ ಜೀವನದ ಪ್ರಮುಖ ವ್ಯಕ್ತಿಯಾಗಿ ಪರಿಣಮಿಸಿದ್ದಳು ; ಗ್ಲಾಡ್‌ಸ್ಟನ್‌ಗೆ ಸರಿಸಮಾನಳಾದ ವಾಗ್ಮಿಯೆಂದು ಹೆಸರು ಪಡೆದಿದ್ದಳು ; ಇಂಗ್ಲಿಷ್ ಬರಹಗಾರರಲ್ಲಿ ಆಕೆ ಅಗ್ರಪಂಕ್ತಿಗೆ ಸೇರಿದ್ದಳು ; ದೀನದಳಿತರ ಸೇವೆಯಲ್ಲಿ ಆಕೆಯನ್ನು ಮೀರಿಸಿದವರು ಇರಲಿಲ್ಲ ; ಆಕೆಯ ಧೈರ್ಯ ಸ್ಥೈರ್ಯಗಳು ಮನೆ ಮಾತಾಗಿದ್ದುವು. ಆಕೆಯ ಕ್ರೈಸ್ತಮತ ವಿರೋಧ ವನ್ನೂ, ನಿರೀಶ್ವರವಾದವನ್ನೂ ಒಪ್ಪದ ಕೆಲವರು, ಮುಖ್ಯವಾಗಿ ಕ್ರೈಸ್ತ ಪಾದ್ರಿಗಳು ಆಕೆಯನ್ನು ಆಗಾಗ್ಗೆ ದೂಷಣೆ ಮಾಡುತ್ತಿದ್ದರಾದರೂ ಅದು ಆಕೆಯ ಘನತೆಗೆ ಏನು ಕುಂದನ್ನೂ ತಂದಿರಲಿಲ್ಲ. ಜನ ಇಂಥ ದೂಷಣೆಯ ಮಾತಿಗೆ ಕಿವಿಗೊಡದೆ, ಆಕೆಯನ್ನು ಸ್ಕೂಲ್ ಬೋರ್ಡಿನ ಸದಸ್ಯತ್ವಕ್ಕೆ ಆರಿಸಿದ್ದೇ ಆಕೆಯ ಜನಪ್ರಿಯತೆಯ ಕುರುಹು ಎನ್ನಬಹುದು. ಈ ಸ್ಕೂಲ್‌ಬೋರ್ಡ್ ಸದಸ್ಯತ್ವ ಆಕೆಯ ಪಾರ್ಲಿಮೆಂಟ್ ಸದಸ್ಯತ್ವಕ್ಕೆ ಪೀಠಿಕೆಯೆಂದು ಕೂಡ ಅನೇಕರು ಅಂದು ಭಾವಿಸಿದರು.

ಇಷ್ಟು ಪ್ರಶಸ್ತಿ, ಇಷ್ಟು ಜನಪ್ರಿಯತೆ ದೊರೆತ ಮೇಲೆ, ಆ ಬಂಡವಾಳದ ಪ್ರತಿಫಲ ಪಡೆಯುತ್ತ ಆನಿ ಬೆಸೆಂಟ್ ಸುಮ್ಮನೆ ಕೂರಬಹುದಾಗಿತ್ತು. ಆದರೆ ಆಕೆಯ ಚೇತನ ಅಂಥದಲ್ಲ. ವಿಶ್ರಾಂತಿಯೆಂಬ ಹೆಸರಿನ ಸೋಮಾರಿತನ ಅದಕ್ಕೆ ಒಗ್ಗುತ್ತಿರಲಿಲ್ಲ. ಆಕೆಯ ಬುದ್ಧಿಯೂ ಹಾಗೆಯೇ. ಅದೂ ಸೋತು ಕೂರುತ್ತಿರಲಿಲ್ಲ. ಆಕೆ ಒಪ್ಪಿಕೊಂಡಿದ್ದ ತತ್ವಗಳನ್ನು ಅದು ಪದೇಪದೇ ವಿಮರ್ಶಿಸಿ, ಅದರ ಲೋಪ, ದೋಷಗಳನ್ನು ಅಪೂರ್ಣತೆಗಳನ್ನು ಗೊತ್ತುಹಚ್ಚುವುದರಲ್ಲಿ ತೊಡಗುತ್ತಿತ್ತು. ಆಕೆಯ ಈ ಗುಣವೇ ಆಕೆ ಕ್ರೈಸ್ತಮತವನ್ನು ನಿರಾಕರಿಸುವಂತೆ ಮಾಡಿತ್ತು; ನಿರೀಶ್ವರವಾದಿಗಳ, ಸ್ವತಂತ್ರ ವಿಚಾರವಾದಿಗಳ, ಅನಂತರ ಸಮತಾವಾದಿಗಳ ಪಂಥವನ್ನು ಸೇರುವಂತೆ

ಮಾಡಿತು. ಅದೇ ಗುಣವೇ ಆಕೆ ಸಮತಾವಾದಿಗಳ ಗುಂಪನ್ನು ತೊರೆದು ಅಧ್ಯಾತ್ಮ ಮಾರ್ಗವನ್ನವಲಂಬಿಸುವಂತೆಯೂ ಮಾಡಿತೆನ್ನಬಹುದು.

ಸಮತಾವಾದಿಗಳ ಜೊತೆ ಸೇರಿಕೊಂಡು, ಜೀವನದ ದುರ್ಭರ ಸ್ಥಿತಿಗಳ ಮೇಲೆ ಹೋರಾಟವನ್ನು ಕೈಗೊಂಡಮೇಲೆ ಆನಿ ಬೆಸೆಂಟ್‌ಳ ಮನಸ್ಸಿನಲ್ಲಿ ಮತ್ತೆ ಹೊಸ ಹೊಸ ಸಮಸ್ಯೆಗಳು ಮೂಡಲಾರಂಭಿಸಿದವು. ಅರ್ಥಶಾಸ್ತ್ರದ ದೃಷ್ಟಿಯಿಂದ, ಸಮತಾವಾದವು ಸಾಮಾಜಿಕ ಲೋಪದೋಷಗಳನ್ನು ಪರಿಹರಿಸಲು ಸಮರ್ಥವೆಂದು ಆಕೆಗೆ ತೋರಿತಾದರೂ, ಈ ಲೋಪದೋಷಗಳನ್ನು ಪೂರ್ಣವಾಗಿ ಪರಿಹರಿಸಲು ಸಮತಾವಾದವೊಂದರಿಂದಲೇ ಸಾಧ್ಯವಿಲ್ಲವೆಂದೂ ಅದರಲ್ಲೇನೋ ಕೊರತೆಯಿದೆಯೆಂದೂ ಆಕೆ ಭಾವಿಸಿದಳು. ಮಾನವರೆಲ್ಲರೂ ಅಣ್ಣತಮ್ಮಂದಿರು ಎಂಬ ಭಾವನೆಯನ್ನು ಪ್ರೇರೇಪಿಸುವ, ಬೆಳೆಸುವ ಶಕ್ತಿ ಸಾಮರ್ಥ್ಯಗಳು ಸಮತಾವಾದಕ್ಕಿಲ್ಲ ಎನ್ನಿಸಿತು—ಆಕೆಗೆ. ನಿಸ್ವಾರ್ಥತೆಯಿಂದ ಜನಸೇವೆಮಾಡುವ ಪ್ರಜಾಸೇವಕರ ಪಡೆಯೊಂದನ್ನು ಕಟ್ಟಲು ಮಾಡಿದ ಪ್ರಯತ್ನಗಳು ನಿಷ್ಫಲವಾದಾಗ, ಮೇಲ್ಮಟ್ಟದ ಸಾಮಾಜಿಕ ವ್ಯವಸ್ಥೆಯನ್ನು ಕಟ್ಟಲು ತಕ್ಕ ಜನಸಂಪತ್ತಿಯೇ ಇಲ್ಲವಲ್ಲ ಎನ್ನಿಸಿತು. ಮಾನವನೇ ಆರಾಧ್ಯಮೂರ್ತಿಯಾಗಿರುವ ದೇವಾಲಯವನ್ನು ಕಟ್ಟಲು ನಮ್ಮಲ್ಲಿ ವಸ್ತು ಸಂಪತ್ತಿಯಿಲ್ಲವಲ್ಲ ಎನ್ನಿಸಿತು. ಈ ಭಾವನೆಗಳು ಆಕೆಯ ಮನಸ್ಸಿನಲ್ಲಿ ಬಲಗೊಂಡಂತೆ, ತನ್ನ ತತ್ವಜ್ಞಾನ ಅಪೂರ್ಣವೆಂಬುದರ ಅರಿವು ಆಕೆಗೆ ಉಂಟಾಯಿತು. ಆಗ ತಾನೆ ಹೊಸದಾಗಿ, ವಿಜ್ಞಾನಪ್ರಪಂಚಕ್ಕೆ ಪ್ರವೇಶಿಸಿದ್ದ ಮನಶ್ಶಾಸ್ತ್ರ- ಮಾನವನ ಮನಸ್ಸು, ವ್ಯಕ್ತಿತ್ವಗಳ ಅಗಾಧತೆ, ಬಹುಮುಖತ್ವಗಳನ್ನು ನಿರೂಪಿಸಿ- ಆಕೆಯ ಸಮಸ್ಯೆಯನ್ನು ಇನ್ನಷ್ಟು ಜಟಿಲಮಾಡಿತು. ಈ ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕಲೇಬೇಕೆಂದು ಆಕೆಯ ಮನಸ್ಸು ತವಕಗೊಂಡಿತು. ದಿನದಿನಕ್ಕೆ ಈ ತವಕ ಹೆಚ್ಚಿತೇ ವಿನಾ ಸಮಸ್ಯೆಗಳಿಗೆ ಪರಿಹಾರ ಕಾಣಲಿಲ್ಲ.

ಈ ನಿಷ್ಫಲತೆಯಿಂದ ಆನಿ ಬೆಸೆಂಟ್ ಒಮ್ಮೊಮ್ಮೆ ಜುಗುಪ್ಸೆ ಹೊಂದಿ ಅಧೀರಳಾಗುತ್ತಿದ್ದಳು. ತಾನು ಕತ್ತಲಲ್ಲಿ ತೊಳಲುತ್ತಿರುವುದಾಗಿ ಭಾವಿಸಿ ಹಂಬಲಿಸುತ್ತಿದ್ದಳು. ಬೆಳಕನ್ನರಸಲು ಪ್ರಯತ್ನಿಸಿ, ಎ. ಪಿ. ಸಿನ್ನೆಟ್ ಮುಂತಾದವರು ಪ್ರತಿಪಾದಿಸುತ್ತಿದ್ದ ರಹಸ್ಯ ಜಗತ್ತನ್ನು ಕುರಿತ ಸಾಹಿತ್ಯವನ್ನು ಅಧ್ಯಯನ

ಮಾಡಲಾರಂಭಿಸಿದಳು. ಅತೀಂದ್ರಿಯ ಶ್ರೋತೃತ್ವ, ಅತೀಂದ್ರಿಯ ದೃಷ್ಟಿ, ಪರಚಿತ್ತವ್ಯಾಪಾರಗ್ರಹಣ ಮುಂತಾದ ಅತೀಂದ್ರಿಯ ಶಕ್ತಿಗಳನ್ನು ಕೈಗೂಡಿಸಿಕೊಳ್ಳಲು ಆ ಗ್ರಂಥಗಳಲ್ಲಿ ನಿರೂಪಿಸಿದ್ದ ಸಾಧನಕ್ರಮಗಳನ್ನೂ ಕೈಗೊಂಡಳು. ರಹಸ್ಯವಿದ್ಯಾವಾದಿಗಳು ಹೇಳುತ್ತಿದ್ದ ಅನೇಕ ಅಂಶಗಳು ಆಕೆಗೆ ಒಪ್ಪಿಗೆಯಾಗಲಿಲ್ಲವಾದರೂ, ಅತೀಂದ್ರಿಯಶಕ್ತಿಗಳು ಉಂಟೆಂದೂ ಅವನ್ನು ಕೈಗೂಡಿಸಿಗೊಳ್ಳಬಹುದೆಂದೂ ನಂಬಿಕೆಯುಂಟಾಯಿತು. ಸಾಮಾನ್ಯ ಮಾನವ ಶಕ್ತಿಗಿಂತ ಮಿಗಿಲಾದ ಯಾವುದೋ ಬೃಹತ್ ರಹಸ್ಯ ಶಕ್ತಿಯೊಂದುಂಟೆಂದೂ ಏನಾದರೂ ಮಾಡಿ ಆ ಶಕ್ತಿಯನ್ನು ಸಾಧಿಸಿಕೊಳ್ಳಬೇಕೆಂದೂ ಆಕೆಗೆ ಅದಮನೀಯ ಆಸೆಯುಂಟಾಯಿತು. ಈ ಶಕ್ತಿಸಾಧನೆಯ ಅಂಗವಾಗಿ, ಪ್ರತಿದಿನ ಹೊತ್ತು ಮುಳುಗಿದ ಮೇಲೆ, ಒಬ್ಬಳೇ ಕುಳಿತು, ಈ ವಿಚಾರಗಳ ಬಗ್ಗೆ ಆಲೋಚನೆ ಮಾಡುವುದು ಆರಂಭವಾಯಿತು. ಈ ಆಲೋಚನೆಗಳು ಬಗೆಹರಿಯದೆ, ಜೀವನವನ್ನು ಕುರಿತು ಮನಸ್ಸಿನಲ್ಲಿ ಹೊಸದಾಗಿ ಉದ್ಭವಿಸಿದ್ದ ಸಮಸ್ಯೆಗಳಿಗೆ ಉತ್ತರ ದೊರೆಯದಿದ್ದಾಗ ಆನಿ ಬೆಸೆಂಟ್‌ಳ ಮನಸ್ಸಿನಲ್ಲಿ ತೀವ್ರ ಕಾತರ ಉಂಟಾಗುತ್ತಿತ್ತು.

ಒಂದು ದಿನ ಆಕೆ ಇಂಥ ಕಾತರದಲ್ಲಿ ಸಿಕ್ಕಿಬಿದ್ದು ಕಿಂಕರ್ತವ್ಯ ಮೂಢಳಾಗಿದ್ದಾಗ ಎಲ್ಲೋ ದೂರದಿಂದ ಒಂದು ಧ್ವನಿ ಆಕೆಯನ್ನುದ್ದೇಶಿಸಿ, ಕೆಲವು ಪ್ರಶ್ನೆಗಳನ್ನು ಕೇಳಿದಂತಾಯಿತು. ಆ ಧ್ವನಿ ಯಾರದೆಂಬುದು ಆಕೆಗೆ ಒಡನೆಯೇ ಗೊತ್ತಾಗದಿದ್ದರೂ, ಅದು ಪರಿಚಿತ ಧ್ವನಿಯಂತೆ ತೋರಿತು. ಆನಿ ಬೆಸೆಂಟ್ ಆ ಪ್ರಶ್ನೆಗಳಿಗೆ ಉತ್ತರ ಕೊಟ್ಟಮೇಲೆ "ಅಂಜಬೇಡ, ಅಳುಕಬೇಡ, ಧೈರ್ಯವಾಗಿರು. ಜ್ಞಾನದೀಪ ಸಮೀಪಗತವಾಗುತ್ತಿದೆ" ಎಂದು ಹೇಳಿತು ಆ ಧ್ವನಿ.

ಆನಿ ಬೆಸೆಂಟ್ ಕ್ರೈಸ್ತ ಮತದಲ್ಲಿ ನಂಬಿಕೆಯನ್ನು ಕಳೆದುಕೊಂಡು, ಸಂಸಾರದಲ್ಲಿ ಸುಖ ಲವಲೇಶವಿಲ್ಲದೆ, ಅತೀವ ದುಃಖವನ್ನನುಭವಿಸುತ್ತಾ, ಅದನ್ನು ಭರಿಸಲು ಸಾಧ್ಯವಿಲ್ಲದೆ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದಾಗ, ಅದನ್ನು ನಿರೋಧಿಸಿದ ಧ್ವನಿಯೇ ಅದು. ಆ ಧ್ವನಿ ಕೊಟ್ಟ ಆಶ್ವಾಸನವನ್ನು ಕೇಳಿ ಆನಿ ಬೆಸೆಂಟ್‌ಳ ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು.

ಎರಡು ವಾರಗಳು ಕಳೆದುವು. ಆನಿ ಬೆಸೆಂಟ್‌ಳ ಆಪ್ತಮಿತ್ರ ಸ್ಟೀಡ್‌ರವರು, ಆಕೆಯ ಕೈಗೆ ಎರಡು ದೊಡ್ಡ ಸಂಪುಟಗಳನ್ನು ಕೊಟ್ಟು, "ಈ ಎರಡು ಪುಸ್ತಕಗಳನ್ನೂ ವಿಮರ್ಶೆ ಮಾಡುತ್ತೀಯೇನು—ಪಾಲ್‌ಮಾಲ್ ಗೆಜೆಟ್‌ನಲ್ಲಿ ಪ್ರಕಟಿಸುವುದಕ್ಕಾಗಿ. ನಮ್ಮ ಪತ್ರಿಕಾ ಕಛೇರಿಯ ಸಂಪಾದಕ ವರ್ಗದ ಹುಡುಗರು ಈ ಪುಸ್ತಕಗಳನ್ನು ವಿಮರ್ಶಿಸಲು ಹಿಂದು ಮುಂದು ನೋಡುತ್ತಿದ್ದಾರೆ. ಆದರೆ ನಿನಗೆ ಈ ಪುಸ್ತಕಗಳಲ್ಲಿ ಹೇಳಿರುವ ವಿಚಾರಗಳ ತಿಳಿವಳಿಕೆಯಿದೆಯಾಗಿ ಇವು ನಿನಗೆ ಅರ್ಥವಾಗಬಹುದು" ಎಂದರು.

ಆ ಎರಡು ಪುಸ್ತಕಗಳು, ಮೇಡಂ ಬ್ಲವಾಟ್‌ಸ್ಕಿ ಬರೆದು ಪ್ರಕಟಿಸಿದ್ದ "ರಹಸ್ಯ ತತ್ವ"ದ ಎರಡು ಸಂಪುಟಗಳು.

ಆನಿ ಬೆಸೆಂಟ್‌ಳ ಮನಸ್ಸು ಕೂಡ "ರಹಸ್ಯ ತತ್ವ"ದ ಕಡೆಗೆ ವಾಲಿದ್ದರಿಂದ, ಆಕೆ ಸ್ಟೀಡ್‌ರವರ ಸೂಚನೆಯನ್ನು ಒಪ್ಪಿ ಆ ಗ್ರಂಥಗಳನ್ನು ತೆಗೆದುಕೊಂಡು ಹೋದಳು. ಮನೆಯನ್ನು ತಲುಪಿದ್ದೇ ತಡ, ಆ ಗ್ರಂಥಗಳ ವಾಚನವನ್ನಾರಂಭಿಸಿದಳು. ಪುಟದಿಂದ ಪುಟಕ್ಕೆ ಆಕೆಯ ಆಸಕ್ತಿ ಹೆಚ್ಚಿತು. ಅವು ಚಿರಪರಿಚಿತವಾದ ಅಭಿಪ್ರಾಯಗಳಂತೆ ತೋರಿದುವು. ಒಂದೊಂದು ವಿಚಾರವನ್ನೂ ಕುರಿತು ಓದುತ್ತಿದ್ದಂತೆ, ಮನಸ್ಸು ಆ ವಿಚಾರದ ಕೊನೆಯ ನಿರ್ಣಯವನ್ನು ಥಟ್ಟನೆ ಗ್ರಹಿಸುತ್ತಿತ್ತು. ಎಷ್ಟು ಸಹಜ, ಎಷ್ಟು ತರ್ಕಬದ್ಧ, ಎಷ್ಟು ಸೂಕ್ಷ್ಮ ಆದರೂ ಎಷ್ಟು ಸ್ಪಷ್ಟ ಈ ವಿಚಾರವಾಹಿನಿ ಎನಿಸಿತು ಆನಿ ಬೆಸೆಂಟ್‌ಗೆ!

ಆ ಎರಡು ಪುಸ್ತಕಗಳನ್ನೂ ಓದಿ ಮುಗಿಸುವ ಹೊತ್ತಿಗೆ ಆಕೆಯ ಚಿಜ್ಜ್ಯೋತಿ ಪ್ರಜ್ವಾಲಿತವಾಯಿತು. ಪರಸ್ಪರ ಸಂಬಂಧ ವಿರಹಿತವೆಂದು ತೋರುತ್ತಿದ್ದ ಅನೇಕ ಅಂಶಗಳು ಒಂದು ಮಹಾ ವ್ಯವಸ್ಥೆಯ ಸುಸಂಘಟಿತ ಭಾಗವೆಂಬುದು, ಆ ಜ್ಞಾನಜ್ಯೋತಿಯ ಬೆಳಕಿನಲ್ಲಿ ಆಕೆಗೆ ಸ್ಪಷ್ಟವಾಯಿತು. ಆ ಮಹಾದರ್ಶನದ ಪರಿಣಾಮ ಒಂದು ದೃಷ್ಟಿಯಿಂದ ಕ್ಷಣಿಕವಾಯಿತು. ಏಕೆಂದರೆ ಅಂದು ಅತೀಂದ್ರಿಯ ಪ್ರಜ್ಞೆ ಥಟ್ಟನೆ ಗ್ರಹಿಸಿದ ಸತ್ಯವನ್ನು ಆಕೆ ಕ್ರಮಿಕಸಾಧನೆಯಿಂದ ಮೆಟ್ಟಿಲು ಮೆಟ್ಟಿಲಾಗಿ ಗ್ರಹಿಸಬೇಕಾಯಿತು. ಆದರೂ ಒಮ್ಮೆ ಸಮ್ಯಗ್ದರ್ಶನವಾದ ಮೇಲೆ ಆಕೆಯನ್ನು ಕಾಡುತ್ತಿದ್ದ ಹಲವಾರು ಸಂದೇಹಗಳು ಪರಿಹಾರವಾದುವು. ತಾನು ಅರಸುತ್ತಿದ್ದ ಜ್ಞಾನ, ತನಗೆ

ದೊರೆಯಿತೆಂಬ ಆನಂದವುಂಟಾಯಿತು.

ಆನಿ ಬೆಸೆಂಟ್ "ರಹಸ್ಯ ತತ್ವ"ದ ವಿಮರ್ಶೆಯನ್ನು ಬರೆದು ಕೊಟ್ಟಳು. ಸ್ಟೀಡ್ ಅದನ್ನು ಪಾಲ್‌ಮಾಲ್ ಗೆಜೆಟ್‌ನಲ್ಲಿ ಪ್ರಕಟಿಸುವ ವ್ಯವಸ್ಥೆಯನ್ನೂ ಮಾಡಿದರು. ಅದಿಷ್ಟರಿಂದ ಆನಿ ಬೆಸೆಂಟ್‌ಳ ಜ್ಞಾನದಾಹ ಅಡಗಲಿಲ್ಲ."ರಹಸ್ಯ ತತ್ವ"ವನ್ನು ಬರೆದ ಲೇಖಕಿಯನ್ನು ಕಂಡು ಮಾತನಾಡಬೇಕೆನಿಸಿತು. ಸ್ಟೀಡ್‌ರವರಿಂದ ಆಕೆಗೊಂದು ಪರಿಚಯಪತ್ರವನ್ನು ತೆಗೆದುಕೊಂಡು, ಆಕೆಯ ಭೇಟಿಗಾಗಿ ಆಕೆಗೊಂದು ಪತ್ರ ಬರೆದಳು. ಆ ಭೇಟಿಗೆ ಒಪ್ಪಿಗೆ ಕೊಟ್ಟು ಬ್ಲವಾಟ್‌ಸ್ಕಿ ಬರೆದ ಪತ್ರ ಆನಿ ಬೆಸೆಂಟ್‌ಗೆ ಆನಂದವನ್ನುಂಟುಮಾಡಿತು.

ಆಗ—೧೮೮೯ರಲ್ಲಿ ಬ್ಲವಾಟ್‌ಸ್ಕಿ, ನಾಟಿಂಗ್‌ಹ್ಯಾಂ ಗುಡ್ಡದ ಲ್ಯಾನ್‌ಡೌನ್ ಬೀದಿಯ ೧೭ನೇ ನಂಬರು ಮನೆಯಲ್ಲಿ ವಾಸಿಸುತ್ತಿದ್ದರು.

ಆನಿ ಬೆಸೆಂಟ್ ಮತ್ತು ಆಕೆಯ ಸಮಾಜವಾದಿ ಮಿತ್ರರಾದ ಹರ್ಬರ್ಟ್ ಬರೋಸ್ ಈ ಇಬ್ಬರೂ ಜೊತೆಯಾಗಿ ಮೇ ಹತ್ತನೇ ತಾರೀಖು ಸಂಜೆ ಬ್ಲವಾಟ್‌ಸ್ಕಿಯವರ ಭೇಟಿ ಮಾಡಲು ಅವರ ಮನೆಗೆ ಹೋದರು.

ಆ ಸಂಜೆ ತಂಪಾಗಿ ಪ್ರಶಾಂತವಾಗಿತ್ತು. ಆನಿ ಬೆಸೆಂಟ್ ಆ ಮನೆಯ ಬಾಗಿಲು ಸೇರಿ ನಿಂತೊಡನೆಯೇ, ಆಕೆಯನ್ನು ಒಳಕ್ಕೆ ಕರೆದೊಯ್ಯಲಾಯಿತು. ದೊಡ್ಡ ಅಂಗಣವನ್ನು ದಾಟುತ್ತಿದ್ದಂತೆ, ಅಂಗಣದ ಆ ಕೊನೆಯ ಬಾಗಿಲು ಥಟ್ಟನೆ ತೆರೆಯಿತು; ಆಮೇಲೆ ಒಂದು ಕೊಟಡಿಯನ್ನು ದಾಟುತ್ತಿರುವಾಗ, ಒಳಕೊಟಡಿಯ ಬಾಗಿಲು ತೆರೆಯಿತು–ಅಲ್ಲಿ ಬ್ಲವಾಟ್‌ಸ್ಕಿ ಕುಳಿತಿದ್ದರು–ಒಂದು ದೊಡ್ಡ ಕುರ್ಚಿಯ ಮೇಲೆ. ಅವರ ಮುಂದೆ ಒಂದು ಮೇಜು ಇತ್ತು. ಆನಿ ಬೆಸೆಂಟ್‌ರವರನ್ನು ಕಂಡೊಡನೆಯೇ, ಆಕೆ, ರೋಮಾಂಚಗೊಳಿಸುವಂಥ ಅಧಿಕಾರವಾಣಿಯಲ್ಲಿ "ನನ್ನ ಪ್ರಿಯ ಮಿಸೆಸ್ ಬೆಸೆಂಟ್. ಎಷ್ಟು ಕಾಲದಿಂದ ಬಯಸುತ್ತಿದ್ದೆ ನಿನ್ನನ್ನು ನೋಡಲು" ಎನ್ನುತ್ತಾ, ಆನಿ ಬೆಸೆಂಟ್‌ಳ ಕೈಯ್ಯನ್ನು ಬಲವಾಗಿ ಹಿಡಿದುಕೊಂಡರು. ಅವರಿಬ್ಬರ ಕಣ್ಣುಗಳು ಒಂದನ್ನೊಂದು ಸಂಧಿಸಿದುವು.

ಆನಿ ಬೆಸೆಂಟ್‌ಗೆ ಎದೆಯುಬ್ಬಿ ಬಾಯಿಗೆ ಬಂದ ಹಾಗಾಯಿತು. ಪೂರ್ವಸ್ಮೃತಿ ಮರಳಿದಂತಾಯಿತು. ಒಡನೆಯೇ ಆಕೆಯ ಅಂತರಂಗದಲ್ಲಿ ಈಕೆಗೆ ಮಣಿಯಬಾರದೆಂದು ದಂಗೆಯ ಹೊಯಲೆದ್ದಿತು. ಕಾಡುಮೃಗ ತನ್ನನ್ನು

ಪಳಗಿಸಲು ಬರುವವನ ಹಿಡಿತದಿಂದ ಕೊಸರಿಕೊಳ್ಳುವಂತೆ, ಆನಿ ಬೆಸೆಂಟ್ ಬ್ಲವಾಟ್‌ಸ್ಕಿಯ ಹಿಡಿತದಿಂದ ಪಾರಾಗಲು ಪ್ರಯತ್ನಿಸಿದಳು..........ಸ್ವಲ್ಪ ಹೊತ್ತಿನಲ್ಲೇ ಈ ಒಳತೋಟಿ ಶಾಂತವಾಯಿತು. ಆನಿ ಬೆಸೆಂಟ್ ಆಕೆಯ ಕೋಣೆಯಲ್ಲಿ ಕುಳಿತು, ಆಕೆಯು ಆಡುತ್ತಿದ್ದ ಮಾತುಗಳನ್ನು ಕೇಳುತ್ತಿದ್ದಳು; ಬ್ಲವಾಟ್‌ಸ್ಕಿ ತನ್ನ ಪ್ರವಾಸಗಳನ್ನು ಕುರಿತು ರಸವತ್ತಾಗಿ ಮಾತನಾಡಿದಳು. ಆನಿ ಬೆಸೆಂಟ್ ಮನಗೊಟ್ಟು ಕೇಳಿದಳು. ಆಕೆಯ ಮಾತಿನಲ್ಲಿ ವಿಶೇಷವೇ ನಿರಲಿಲ್ಲ–ಲೌಕಿಕಸ್ತ್ರೀ ತನ್ನನ್ನು ಕಾಣಲು ಬಂದವರೊಡನೆ, ಕಾಲ ಕಳೆಯಲು ಹರಟೆ ಹೊಡೆಯುವಂತಿತ್ತು. ಅಲೌಕಿಕ, ಆಧ್ಯಾತ್ಮಿಕ, ಅತೀಂದ್ರಿಯಶಕ್ತಿಗಳ ವಿಚಾರವಾಗಿ ಒಂದು ಮಾತು ಕೂಡ ಆಕೆಯ ಬಾಯಿಂದ ಹೊರಬೀಳಲಿಲ್ಲ. ಇದು ಆನಿ ಬೆಸೆಂಟಳಿಗೆ ಆಶ್ಚರ್ಯವನ್ನೇ ಉಂಟುಮಾಡಿತು. "ರಹಸ್ಯ ತತ್ವ"ದ ಲೇಖಕಿ, ಅದನ್ನು ವಿಮರ್ಶೆಮಾಡಿದ ವ್ಯಕ್ತಿಯನ್ನು ಸಂಧಿಸಿದಾಗ ಆ ವಿಚಾರ ವಾಗಿ ಮಾತು ಬರುವುದು ಸಹಜವೇ–ಆದರೆ ಬ್ಲವಾಟ್‌ಸ್ಕಿ ಆ ಮಾತು ಎತ್ತಲೇ ಇಲ್ಲ.

ಮಾತು ಮುಗಿದು ಆನಿ ಬೆಸೆಂಟ್ ಹೊರಡಲು ಎದ್ದಾಗ, ಮೇಡಂ ಬ್ಲವಾಟ್‌ಸ್ಕಿ ತನ್ನ ಉಜ್ವಲ, ತೀಕ್ಷ್ಣದೃಷ್ಟಿಯನ್ನು ಆಕೆಯ ಮೇಲೆ ಸಿಲ್ಲಿಸಿ, ಪ್ರತೀಕ್ಷಾಪೂರ್ಣವಾದ ಧ್ವನಿಯಲ್ಲಿ "ನನ್ನ ಪ್ರಿಯ ಮಿಸೆಸ್ ಬೆಸೆಂಟ್, ನೀನು ನಮ್ಮಲ್ಲೊಬ್ಬಳಾದರೆ!" ಎಂದಿಷ್ಟೇ ಹೇಳಿದರು. ಈ ಮಾತು ತನ್ನ ಕಿವಿಗೆ ಬಿದ್ದೊಡನೆಯೆ, ಆಕೆಯೆಡೆಯಲ್ಲಿ ಮೊಣಕಾಲೂರಿ ಕುಳಿತು ವಂದಿಸ ಬೇಕೆಂಬ ಪ್ರಬಲ ಇಚ್ಛೆಯಾಯಿತು ಆನಿ ಬೆಸೆಂಟ್‌ಗೆ; ಬ್ಲವಾಟ್‌ಸ್ಕಿಯವರ ಮಾತು ಮತ್ತು ದೃಷ್ಟಿಯಲ್ಲಿ ಅಂಥ ಆಕರ್ಷಣೆಯಿತ್ತು. ಆದರೂ ತಾನು ಹಾಗೆ ವರ್ತಿಸಲು ಯೋಚಿಸಿದ್ದು ಕೂಡ ದೊಡ್ಡ ತಪ್ಪಾಯಿತೆಂಬ ಹೆಮ್ಮೆಯ ಭಾವನೆಯನ್ನು ಬಲಪಡಿಸಿಕೊಂಡು ಆನಿ ಬೆಸೆಂಟ್ ಆಕೆಗೆ ನಮಿಸದೆ, ರೂಢಿಯ ಮರ್ಯಾದೆಯ ಮಾತುಗಳನ್ನಾಡಿ ಬ್ಲವಾಟ್‌ಸ್ಕಿಯನ್ನು ಬಿಟ್ಟು ಬಂದಳು.

೧೦

ಮೇಡಂ ಬ್ಲವಾಟ್‌ಸ್ಕಿಯನ್ನು ಕಂಡು ಬಂದಮೇಲೆ ಆನಿ ಬೆಸೆಂಟ್‌ಳ ಹೃದಯದಲ್ಲಿ ಮತ್ತೆ ಬಿರುಗಾಳಿಯೆದ್ದಿತು.

ಕ್ರೈಸ್ತಧರ್ಮವನ್ನು ತೊರೆದಾಗ ಆಕೆ ತನ್ನ ಬಂಧು ಬಾಂಧವರ ಪ್ರೀತಿಯನ್ನು ಕಳೆದುಕೊಳ್ಳಬೇಕಾಯಿತು ; ಬ್ರಾಡ್‌ಲಾರವರ ಸ್ನೇಹ ಮಾಡಿದಾಗ, ಅವರ ವಿರೋಧಿಗಳ ದೂಷಣೆಗೊಳಗಾಗಬೇಕಾಯಿತು; ಸಮಾಜವಾದಿಗಳನ್ನು ಸೇರಿದಾಗ ಬ್ರಾಡ್‌ಲಾರವರಿಗೂ ಅವರ ಅನುಯಾಯಿಗಳಿಗೂ ಅಪ್ರಿಯವಾಗಬೇಕಾಯಿತು—ಈಗ ? —ನಿರೀಶ್ವರವಾದಿಯಾಗಿದ್ದ ತಾನು, ಪ್ರತ್ಯಕ್ಷ ಪ್ರಮಾಣವನ್ನು ಮಾತ್ರ ಒಪ್ಪುತ್ತಿದ್ದ ತಾನು, ಈಶ್ವರ ತತ್ವವನ್ನೂ ಅತೀಂದ್ರಿಯ ವಾದವನ್ನೂ ಒಪ್ಪಿಕೊಂಡು ಬ್ಲವಾಟ್‌ಸ್ಕಿಯ ಅನುಯಾಯಿಯಾಗಿ, ಬ್ರಹ್ಮಜ್ಞಾನ ಸಮಾಜವನ್ನು ಸೇರಿದರೆ ? —ಸಮತಾವಾದಿಗಳು, ನಿರೀಶ್ವರವಾದಿಗಳು ಎಲ್ಲರೂ ತನ್ನನ್ನು ಹಾಸ್ಯ ಮಾಡುವುದಲ್ಲದೆ, ಕೂಲಿಕಾರರ ಹಿತಸಾಧನೆಗಾಗಿ, ಮಕ್ಕಳ ಹಿತಸಾಧನೆಗಾಗಿ ಕೆಲವು ವರ್ಷಗಳು ದುಡಿದುದರ ಪರಿಣಾಮವಾಗಿ, ಇತ್ತೀಚೆಗೆ ತನ್ನ ಬಗ್ಗೆ ಜನರಲ್ಲಿ ಹುಟ್ಟುತ್ತಿರುವ ಸದಭಿಪ್ರಾಯ, ತಾನು ಈಗ, ತನ್ನ ಹಳೆಯ ಸಂಬಂಧವನ್ನೆಲ್ಲಾ ಬಿಟ್ಟು, ಬ್ರಹ್ಮಜ್ಞಾನ ಸಮಾಜವನ್ನು ಸೇರುವುದರಿಂದ ಹಾಳಾಗುವುದಿಲ್ಲವೆ ? ಈ ಸದಭಿಪ್ರಾಯವೂ ಹಾಗಿರಲಿ, ಮುಂದೆ ತನ್ನ ವಿಚಾರವಾಗಿ ಹುಟ್ಟಬಹುದಾದ ದುರಭಿಪ್ರಾಯದ ಮಾತೂ ಹಾಗಿರಲಿ ; ಈಗ ಬ್ರಹ್ಮಜ್ಞಾನ ಸಮಾಜವನ್ನು ಸೇರುವುದೆಂದರೆ, ತನ್ನೊಡನೆ ಭುಜಕ್ಕೆ ಭುಜಕೊಟ್ಟು ಹೋರಾಡಿದ, ಅನೇಕ ಸನ್ಮಿತ್ರರಿಂದ ದೂರವಾಗಬೇಕಾಗುವುದು—

ಆದರೆ, ದೀರ್ಘಕಾಲದಿಂದ ಕಾಡುತ್ತಿದ್ದ ಸಮಸ್ಯೆಗಳಿಗೆ ಉತ್ತರ ತೋರುತ್ತಿರುವಾಗ ಆ ಮಾರ್ಗದಲ್ಲಿ ಮುಂದುವರೆಯದಿರುವುದು ಆತ್ಮದ್ರೋಹವೆನಿಸಿತು—ಆನಿ ಬೆಸೆಂಟ್‌ಗೆ. ಅಷ್ಟೇ ಅಲ್ಲದೆ ಈ ಸ್ಥಿತಿಯಲ್ಲಿ ಆತ್ಮಸಾಕ್ಷಿಯಂತೆ ನಡೆದುಕೊಳ್ಳದಿದ್ದಲ್ಲಿ, ಈ ಮೊದಲು ಆತ್ಮಸಾಕ್ಷಿಯಂತೆ ನಡೆದು, ಅದಕ್ಕಾಗಿ ಅನುಭವಿಸಿದ ಕಷ್ಟ ನಿಷ್ಠುರಗಳೆಲ್ಲವೂ ವ್ಯರ್ಥವಾಗುವುದೆನಿಸಿತು. ಎಲ್ಲದ್ದಕ್ಕಿಂತಲೂ ಹೆಚ್ಚಾಗಿ, ಆತ್ಮಸಾಕ್ಷಿಗೆ ವಿರುದ್ಧವಾಗಿ

ನಡೆಯುವುದು ಹೇಡಿತನವೆನಿಸಿತು ಆಕೆಗೆ.

ಕೆಲವು ದಿನಗಳು ಕಳೆದಮೇಲೆ ಆನಿ ಬೆಸೆಂಟ್ ಮತ್ತೆ ಬ್ಲವಾಟ್‌ಸ್ಕಿಯವರನ್ನು ನೋಡಲು ಹೋದಳು. ಆಗ ತಾನಾಗಿ ಬ್ರಹ್ಮಜ್ಞಾನ ಸಮಾಜದ ಮಾತೆತ್ತಿದ್ದಳು. ಆ ಸಮಾಜವನ್ನು ಸೇರಬೇಕೆಂಬ ಆಸೆಯೇನೋ ಆ ಹೊತ್ತಿಗೆ ಆಕೆಯ ಹೃದಯದಲ್ಲಿ ಬಲಗೊಂಡಿತ್ತು. ಆದರೆ ಅವಳ ಮನಸ್ಸು ಹೃದಯದ ಆ ನಿರ್ಣಯಕ್ಕೆ ತನ್ನ ಒಪ್ಪಿಗೆಯನ್ನಿನ್ನೂ ಕೊಟ್ಟಿರಲಿ. ಸಮಾಜಕ್ಕೆ ಸೇರುವುದೇ ಬೇಡವೇ ಎಂಬ ಬಗ್ಗೆ ತುಮುಲ ನಡೆದೇಯಿತ್ತು ಆಕೆಯ ಅಂತರಂಗದಲ್ಲಿ.

ಆನಿ ಬೆಸೆಂಟ್, ಬ್ರಹ್ಮಜ್ಞಾನ ಸಮಾಜದ ಮಾತೆತ್ತಿದೊಡನೆಯೇ ಬ್ಲವಾಟ್‌ಸ್ಕಿ ಆಕೆಯ ಕಡೆ ದಿಟ್ಟಿಸಿ ನೋಡಿ, "ಸೈಕಿಕಲ್ ರಿಸರ್ಚ್ ಸೊಸೈಟಿಯವರು ನನ್ನ ವಿಚಾರವಾಗಿ ಪ್ರಕಟಿಸಿರುವ ವರದಿಯನ್ನು ಓದಿದ್ದೀಯೇನು ?" ಎಂದು ಕೇಳಿದರು.

"ಅದರ ವಿಚಾರವಾಗಿ ಕೇಳಿದಂತೆ ಕೂಡ ನೆನಪಿಲ್ಲ." ಎಂದಳು ಆನಿ ಬೆಸೆಂಟ್.

"ಹಾಗಾದರೆ ಅದನ್ನು ಓದು. ಅದನ್ನು ಓದಿದ ಮೇಲೆ ನೀನು ಮತ್ತೆ ನನ್ನಲ್ಲಿಗೆ ಬಂದರೆ,—ನೋಡೋಣ." ಎಂದಳು ಬ್ಲವಾಟ್‌ಸ್ಕಿ.

ಬ್ರಹ್ಮಜ್ಞಾನ ಸಮಾಜದ ವಿಚಾರವಾಗಿ ಆಕೆ ಇನ್ನೇನೂ ಮಾತನಾಡಲಿಲ್ಲ. ಸಂಭಾಷಣೆ ಆಕೆಯ ಪ್ರವಾಸ, ವಿವಿಧ ದೇಶಗಳ ಅನುಭವದ ಕಡೆಗೆ ತಿರುಗಿತು.

ಆಕೆಯನ್ನು ಬಿಟ್ಟು ಬಂದಮೇಲೆ, ಆನಿ ಬೆಸೆಂಟ್ ಆ ವರದಿಯನ್ನು ಹುಡುಕಿ ತಂದು ಓದಿದಳು. ಅದರಲ್ಲಿ ಊಹೆಗಳ ಮೇಲೆ ಕಟ್ಟಿರುವ ನಿರ್ಣಯಗಳು, ನಂಬಿಕೆಗೆ ಅನರ್ಹವಾದ ಆಪಾದನೆಗಳು, ಆ ಆಪಾದನೆಗಳಿಗೆ ಆಧಾರವಾಗಿ ಕೊಟ್ಟಿರುವ ಸಾಕ್ಷಿಗಳ ಕುಖ್ಯಾತಿ — ಇವೆಲ್ಲವನ್ನೂ ವಿವೇಚಿಸಿದ ಮೇಲೆ ಆ ವರದಿಯಲ್ಲಿದ್ದ ಆರೋಪಣೆಗಳು ಬುಡವಿಲ್ಲದುವೆಂದು ಆಕೆಯ ಮನಸ್ಸಿಗೆ ಖಚಿತವಾಯಿತು.

ವರ್ಷ ವರ್ಷಗಳ ಪರಿಶ್ರಮದಿಂದ ಕಟ್ಟಿದ್ದ ಸ್ನೇಹ ಸಂಬಂಧಗಳು ಸಿಡಿಮದ್ದಿಗೆ ಗುರಿಯಾದರೂ ಸರಿ, ತಾನು ಬ್ರಹ್ಮಜ್ಞಾನ ಸಮಾಜವನ್ನು ಸೇರಲೇಬೇಕೆಂದು ಆನಿ ಬೆಸೆಂಟ್ ನಿರ್ಧರಿಸಿದಳು.

## ೧೧

೧೮೮೯ನೇ ಮೇ ತಿಂಗಳು ೨೧ನೇ ತಾರೀಖು ಆನಿ ಬೆಸೆಂಟ್‌ಳ ಜೀವನದಲ್ಲಿ ಅತ್ಯಂತ ಪ್ರಮುಖವಾದ ದಿನವೆನ್ನಬಹುದು. ಅಂದು, ಆಕೆ ಲಂಡನ್ನಿನ ಅಡಲ್ಫಿ ಪ್ರದೇಶದ ಡ್ಯೂಕ್ ರಸ್ತೆಯ ಏಳನೇ ನಂಬರ್ ಮನೆಯಲ್ಲಿದ್ದ ಬ್ರಹ್ಮಜ್ಞಾನ ಪ್ರಕಾಶನ ಸಂಸ್ಥೆಯ ಕಾರ್ಯಾಲಯಕ್ಕೆ ಹೋಗಿ ಬ್ರಹ್ಮಜ್ಞಾನ ಸಮಾಜದ ಸದಸ್ಯತ್ವದ ಅರ್ಜಿಗೆ ರುಜುಹಾಕಿದಳು. ತಾನು ಕಳೆದುಕೊಳ್ಳಬೇಕಾದ ಸ್ನೇಹ, ಅನುಭವಿಸಬೇಕಾದ ಅಣಕ, ಹೀಯಾಳಿಕೆಗಳಾವುದನ್ನೂ ಲಕ್ಷ್ಯಮಾಡದೆ, ತನ್ನ ಆತ್ಮಸಾಕ್ಷಿಗೆ ವಿರೋಧವಾಗದಂತೆ ನಡೆದುಕೊಂಡಳು. ಆತ್ಮಸಾಕ್ಷಿಗೆ ವಿರೋಧವಾಗದಂತೆ ನಡೆದುಕೊಳ್ಳಬೇಕೆಂಬ ತತ್ವಕ್ಕೆ ಕಟ್ಟುಬಿದ್ದು ಈ ಮೊದಲು ಆಕೆ ಅತಿಮಾನುಷ ಧೈರ್ಯದಿಂದ ವರ್ತಿಸಿದಂತೆ ಈ ಬಾರಿಯೂ ವರ್ತಿಸಿದಳು.

ಸಮಾಜದ ಸದಸ್ಯತ್ವಕ್ಕೆ ಸೇರಿ, ಪ್ರಮಾಣ ಪತ್ರವನ್ನು ಪಡೆದೊಡನೆಯೇ ಆನಿ ಬೆಸೆಂಟ್, ಮೇಡಂ ಬ್ಲವಾಟ್‌ಸ್ಕಿಯವರನ್ನು ಕಾಣಲು ಅವರ ಮನೆಗೆ ಹೋದಳು. ಅವಳು ಆಕೆಯನ್ನು ಕಂಡಾಗ ಆಕೆ ಏಕಾಕಿಯಾಗಿದ್ದರು. ಆನಿ ಬೆಸೆಂಟ್ ಆಕೆಯನ್ನು ಸಮೀಪಿಸಿ, ಬಗ್ಗಿ ಆಕೆಗೆ ಮುತ್ತಿಟ್ಟಳು. ಏನು ಮಾತನ್ನೂ ಆಡಲಿಲ್ಲ.

ಬ್ಲವಾಟ್‌ಸ್ಕಿಯೇ “ ನೀನು ಸಮಾಜವನ್ನು ಸೇರಿದೆ ?” ಎಂದರು.

“ ಹೌದು.”

“ ಒಳ್ಳೆಯದು.”

ಆನಿ ಬೆಸೆಂಟ್ ಮತ್ತೆ ಬಾಗಿ ಆಕೆಯ ಕೈಗಳನ್ನು ಹಿಡಿದುಕೊಂಡು, ಆಕೆಯ ಕಣ್ಣುಗಳನ್ನೇ ನೋಡುತ್ತಾ:

“ ನೀವು ನನ್ನನ್ನು ನಿಮ್ಮ ಶಿಷ್ಯಳನ್ನಾಗಿ ಮಾಡಿಕೊಳ್ಳುವಿರಾ? ಇಡೀ ಜಗತ್ತೇ ನನ್ನನ್ನು ವಿರೋಧಿಸಿದರೂ, ನೀವು ನನ್ನ ಗುರುವೆಂದು ಘೋಷಿಸುವ ಗೌರವವನ್ನು ನನಗೆ ಕರುಣಿಸುವಿರಾ ?” ಎಂದಳು.

ಆನಿ ಬೆಸೆಂಟ್‌ಳ ಈ ಮಾತು ಕೇಳುತ್ತಿದ್ದಂತೆ, ತುಂಬಾ ಗಂಭೀರ

ವಾಗಿದ್ದ ಬ್ಲವಾಟ್‌ಸ್ಕಿಯವರ ಮುಖದಲ್ಲಿ ಮಾರ್ದವ ಮೂಡಿತು. ಪ್ರಕಾಶ ಮಾನವಾದ ಆಕೆಯ ಕಣ್ಣುಗಳು ಹಸಿಗೂಡಿದುವು. ಆಕೆ ರಾಜಗಾಂಭೀರ್ಯಕ್ಕಿಂತ ಮಿಗಿಲಾದ ಗಾಂಭೀರ್ಯದಿಂದ ತನ್ನ ಕೈಗಳನ್ನು ಆನಿ ಬೆಸೆಂಟ್‌ಳ ತಲೆಯ ಮೇಲಿಟ್ಟು "ನೀನು ಉದಾರಿ; ಗುರುಗಳು ನಿನ್ನನ್ನು ಆಶೀರ್ವದಿಸಲಿ" ಎಂದರು.

ಆನಿ ಬೆಸೆಂಟ್, ಮೇಡಂ ಬ್ಲವಾಟ್‌ಸ್ಕಿಯವರ ಶಿಷ್ಯತ್ವವನ್ನೊಪ್ಪಿಕೊಂಡು ಬ್ರಹ್ಮಜ್ಞಾನ ಸಮಾಜವನ್ನು ಸೇರಿದಳೆಂಬ ಸುದ್ದಿ ಪ್ರಕಟವಾದದ್ದೇ ತಡ–ಬ್ರಿಟನ್ನಿನ ಸ್ವತಂತ್ರ ವಿಚಾರವಾದಿಗಳ, ಸಮತಾವಾದಿಗಳ ಗುಂಪಿನಲ್ಲಿ ದೊಡ್ಡ ಕೋಲಾಹಲವೇ ಉಂಟಾಯಿತು. ಬ್ರಾಡ್ಲಾರವರು ಕೂಡ, ಆಕೆ ತಾನು ಬ್ರಹ್ಮಜ್ಞಾನ ಸಮಾಜವನ್ನು ಸೇರುವ ಮೊದಲು ಆ ಬಗ್ಗೆ ತಮ್ಮೊಡನೆ ಚರ್ಚಿಸದೆ ಹೋದದ್ದು ತಪ್ಪಾಯಿತೆಂದೂ, ಆ ಸಂಬಂಧದಲ್ಲಿ ಆಕೆ ತುಂಬಾ ಆತುರಪಟ್ಟು ವರ್ತಿಸಿದಳೆಂದೂ ನ್ಯಾಷನಲ್ ರಿಫಾರ್ಮರ್ ಪತ್ರಿಕೆಯಲ್ಲಿಯೇ ಬರೆದರು. ಸ್ವತಂತ್ರ ವಿಚಾರವಾದಿಗಳಾದ ಇನ್ನು ಕೆಲವರು, ಗಾಂಭೀರ್ಯದ ಎಲ್ಲೆಯನ್ನು ಕೂಡ ಮೀರಿ ಆಕೆಯನ್ನು ಕಟುವಾಗಿ ಟೀಕಿಸಿದರು.

ಬ್ರಹ್ಮಜ್ಞಾನ ಸಮಾಜದ ತತ್ವಗಳೇನು ನಂಬಿಕೆಗಳೇನು? ಆನಿ ಬೆಸೆಂಟ್ ಆ ಸಮಾಜವನ್ನು ಸೇರಿದ್ದೇಕೆ ? ಎಂದು ಪ್ರಶ್ನಿಸಿ ಪತ್ರಿಕೆಗಳಿಗೆ ಕಾಗದಗಳು ಬಂದುವು.

ಈ ಪ್ರಶ್ನೆಗಳಿಗೆ ಉತ್ತರಕೊಡಲು ಆನಿ ಬೆಸೆಂಟ್ ಸಿದ್ಧಳಾಗಿದ್ದಳು. ಆದರೆ, ವಯ್ಯಕ್ತಿಕವಾದ ಮತ್ತು ಅನೇಕ ಮಂದಿ ವಾಚಕರಿಗೆ ಆಸಕ್ತಿಯಿಲ್ಲದ ಆ ವಿಚಾರವಾಗಿ ದೀರ್ಘ ಲೇಖನಗಳನ್ನು ಬರೆದು ಪತ್ರಿಕೆಗಳ ಸ್ಥಳವನ್ನು ಆಕ್ರಮಿಸುವುದು ನ್ಯಾಯವಲ್ಲವೆಂದು ಆಕೆಗೆ ತೋರಿತು. ಆದ್ದರಿಂದ ಅವಳು ಈ ಪ್ರಶ್ನೆಗಳನ್ನೆಲ್ಲಾ ಅಂಗೀಕರಿಸಿ, ಮೊದಲು ಒಂದು ಚಿಕ್ಕ ಉತ್ತರವನ್ನು ಕೊಟ್ಟಳು: ಅದರಲ್ಲಿ "ಜಾತಿ ಜನಾಂಗಗಳ ಭೇದವಿಲ್ಲದ ಜಗತ್ ಭ್ರಾತೃವರ್ಗವನ್ನು ಸ್ಥಾಪಿಸತಕ್ಕದ್ದು; ಆರ್ಯರ ಸಾಹಿತ್ಯ ಮತ್ತು ತತ್ವಶಾಸ್ತ್ರಗಳ ಅಧ್ಯಯನವನ್ನು ಮುಂದುವರಿಸತಕ್ಕದ್ದು; ಇದುವರೆಗೆ ವಿವರಣೆಗೆ ಸಿಕ್ಕದಿರುವ ಪ್ರಕೃತಿ ನಿಯಮಗಳನ್ನೂ ಪ್ರಕೃತಿಯಲ್ಲೂ ಮಾನವನಲ್ಲೂ ಸುಪ್ತವಾಗಿರುವ ಶಕ್ತಿಗಳನ್ನೂ ಕುರಿತು ಸಂಶೋಧನೆ ನಡೆಸುವುದು ಬ್ರಹ್ಮಜ್ಞಾನ ಸಮಾಜದ ಮೂರು ಮುಖ್ಯ

ಉದ್ದೇಶಗಳು. ಈ ಸಂಘದ ಸದಸ್ಯರು ಮತ ವಿಚಾರದಲ್ಲಿ ತಮಗೆ ಸರಿತೋರಿದ ಅಭಿಪ್ರಾಯಗಳನ್ನಿಟ್ಟುಕೊಂಡಿರಲು ಸ್ವತಂತ್ರರು"– ಎಂದು ಬ್ರಹ್ಮಜ್ಞಾನ ಸಮಾಜದ ಧ್ಯೇಯಗಳನ್ನು ಸ್ಥೂಲವಾಗಿ ಹೇಳಿ, ಆ ಬಗ್ಗೆ ತನ್ನ ಅಭಿಪ್ರಾಯ, ಸಮರ್ಥನೆಗಳನ್ನು ಕುರಿತು ಭಾಷಣ ಮಾಡುವುದಾಗಿ ತಿಳಿಸಿದಳು.

ಅದರಂತೆ, ಆಗಸ್ಟ್ ೪ ಮತ್ತು ೧೧ ನೇ ತಾರೀಖುಗಳಲ್ಲಿ, ಸ್ವತಂತ್ರ ವಿಚಾರವಾದಿಗಳ ಮಹಾಕೇಂದ್ರವಾದ "ಹಾಲ್ ಆಫ್ ಸೈನ್ಸ್" (ವಿಜ್ಞಾನ ಮಂದಿರ)ನಲ್ಲಿ "ನಾನು ಏತಕ್ಕೆ ಬ್ರಹ್ಮಜ್ಞಾನವಾದಿಯಾದೆ?" ಎಂಬ ವಿಚಾರವಾಗಿ ಕಿಕ್ಕಿರಿದ ಸಭೆಗೆ ಭಾಷಣ ಮಾಡಿದಳು. ಅನಂತರ ಆ ಭಾಷಣಗಳ ಸಾರಾಂಶವನ್ನು ಒಂದು ಚಿಕ್ಕ ಪುಸ್ತಕ ರೂಪದಲ್ಲಿ ಪ್ರಕಟಿಸಿದಳು.

ಬ್ರಹ್ಮಜ್ಞಾನ ಸಮಾಜದ ಸದಸ್ಯಳಾದ ಮೇಲೆ ತಾನು ಆ ಹಿಂದೆ ಕೆಲಸ ಮಾಡಿದ ಸಂಸ್ಥೆಗಳ ಬಗ್ಗೆ ತನ್ನ ನಿಲುವೇನೆಂಬುದನ್ನು ಹೇಳಿ, ಸ್ವತಂತ್ರವಿಚಾರ ವಾದಿಗಳು "ನಾನು ತಮ್ಮ ಸಂಸ್ಥೆಯಿಂದ ದೂರವಾಗಬೇಕು ಎಂದು ಅಪೇಕ್ಷಿಸಿದರೆ, ನಾನು ಅದಕ್ಕೆ ಸಿದ್ಧಳಾಗಿದ್ದೇನೆ." ಎಂದೂ ಸೂಚಿಸಿದಳು. ಆದರೆ ಆಕೆ ಸದಸ್ಯತ್ವವನ್ನು ಬಿಡಬೇಕೆಂದು ಸ್ವತಂತ್ರ ವಿಚಾರವಾದಿಗಳು ಒತ್ತಾಯಮಾಡಲಿಲ್ಲ. ಆದರೂ, ಆ ಸಂಸ್ಥೆಯ ಭಾವನೆಗಳು ಸಂಪೂರ್ಣ ವಾಗಿ ಚಾರ್ವಾಕವಾಗಿದ್ದುದರಿಂದ, ಆತ್ಮನ ಅಸ್ತಿತ್ವ, ಆತ್ಮಶಕ್ತಿಗಳಲ್ಲಿ ನಂಬಿಕೆ ಯುಳ್ಳ ತಾನು ಆ ಸಂಸ್ಥೆಯ ಸದಸ್ಯತ್ವವನ್ನೊಪ್ಪಿಕೊಂಡಿರುವುದು ಅಸಂಗತ ವೆಂದು ಆನಿ ಬೆಸೆಂಟ್‌ಳೇ ಮಾರನೆಯ ವರ್ಷ "ನ್ಯಾಷನಲ್ ಸೆಕ್ಯುಲರ್ ಸೊಸೈಟಿ"ಯ ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟಳು.

ತತ್ವ ಪ್ರಮುಖವಾಗಿದ್ದ ಇಂಥ ಸಂಸ್ಥೆಗಳಿಂದ, ತತ್ವಭೇದದ ನಿಮಿತ್ತ ಆಕೆ ದೂರವಾಗಬೇಕಾಯಿತಾದರೂ, ಬ್ರಹ್ಮಜ್ಞಾನ ಸಮಾಜಕ್ಕೆ ಸೇರಿದ ಮೇಲೆ ಕೂಡ ಆನಿ ಬೆಸೆಂಟ್ ತನ್ನ ದೀನದಲಿತ ಸೇವೆಯನ್ನು ನಿಲುಗಡೆಯಿಲ್ಲದೆ ಮುಂದುವರೆಸಿದಳು. ಜೊತೆಗೆ ದಿನದಿನವೂ ಬ್ಲವಾಟ್‌ಸ್ಕಿಯವರ ಸನ್ನಿಧಿಯಲ್ಲಿ ಕುಳಿತು ಬ್ರಹ್ಮಜ್ಞಾನ ಶಿಕ್ಷಣವನ್ನು ಪಡೆದಳು.

ಬ್ಲವಾಟ್‌ಸ್ಕಿಯವರು ಬ್ರಹ್ಮಜ್ಞಾನಿಯಾಗಿದ್ದಂತೆ, ಅಪ್ರತಿಮದಯಾ ಪರಳೂ ಆಗಿದ್ದರು. ಆನಿ ಬೆಸೆಂಟ್ ಆಕೆಯ ಶಿಷ್ಯತ್ವವನ್ನೊಪ್ಪಿಕೊಂಡ

ಕೆಲವು ತಿಂಗಳುಗಳ ಅನಂತರ ಬ್ಲವಾಟ್‌ಸ್ಕಿಯ ಅಭಿಮಾನಿಗಳು, ಆಕೆಗೆ ಒಂದು ಸಾವಿರ ಪೌಂಡುಗಳನ್ನು ಕೊಟ್ಟು, ಆಕೆ ಅದನ್ನು ಜನತೆಯ ಸೇವೆಗಾಗಿ, ಆಕೆಗೆ ಒಳಿತಾಗಿ ತೋರಿದರೆ ಸ್ತ್ರೀಯರ ಸೇವೆಗಾಗಿ ಉಪಯೋಗಿಸಬಹುದೆಂದು ಸೂಚಿಸಿದರು. ಬ್ಲವಾಟ್‌ಸ್ಕಿಯವರು ಈ ದತ್ತಿಯ ವಿಚಾರವನ್ನು ಆನಿ ಬೆಸೆಂಟ್‌ನೊಡನೆ ದೀರ್ಘವಾಗಿ ಚರ್ಚಿಸಿ ಕೂಲಿ ಮಾಡುವ ಹೆಣ್ಣುಮಕ್ಕಳ ಸೌಕರ್ಯಕ್ಕಾಗಿ ಲಂಡನ್ನಿನ ಬಡಜನರು ವಾಸಿಸುವ ಪೂರ್ವಭಾಗದಲ್ಲಿ ಒಂದು ವಿಹಾರ ಕೇಂದ್ರವನ್ನು ಸ್ಥಾಪಿಸ ಬೇಕೆಂದು ನಿರ್ಧರಿಸಿದರು. ಈ ನಿರ್ಣಯವನ್ನು ಕಾರ್ಯರೂಪಕ್ಕೆ ತರಲು ಆನಿ ಬೆಸೆಂಟ್ ತುಂಬಾ ಶ್ರಮಿಸಿದಳು. ಬೋ ರಸ್ತೆಯಲ್ಲಿ ಒಂದು ವಿಸ್ತಾರ ವಾದ ಹಳೆಯ ಮನೆಯನ್ನು ಕೊಂಡುಕೊಂಡು, ಅದನ್ನು ಪೂರ್ಣ ವಾಗಿ ಜೀರ್ಣೋದ್ಧಾರಮಾಡಿ, ಆ ಕಟ್ಟಡಕ್ಕೆ ಸೇರಿದಂತೆ ಒಂದು ದೊಡ್ಡ 'ಹಾಲ್'ಅನ್ನು ಕಟ್ಟಿಸಿದಳು. ೧೮೯೦ನೇ ಆಗಸ್ಟ್ ೧೫ನೇ ತಾರೀಖು ಬ್ಲವಾಟ್‌ಸ್ಕಿಯವರು, ಈ ವಿಹಾರಗೃಹವನ್ನು "ಕೈ ತುಂಬಾ ಕೂಲಿ ದೊರೆಯ ದಿದ್ದರೂ ರಟ್ಟೆಮುರಿದು ಕೆಲಸಮಾಡುವ" ಹೆಣ್ಣು ಮಕ್ಕಳ ಸೌಕರ್ಯ, ಉಪಯೋಗಗಳಿಗಾಗಿ ಮೀಸಲು ಮಾಡಿದರು. ಕಷ್ಟ ದುಃಖಗಳಿಂದ ನರಳುತ್ತಿರುವ ಜನತೆಯ ಅದರಲ್ಲೂ ಹೆಣ್ಣುಮಕ್ಕಳ, ಬಾಲಕ ಬಾಲಕಿಯರ ಬಗ್ಗೆ ಬ್ಲವಾಟ್‌ಸ್ಕಿಯವರಿಗೆ ತುಂಬಾ ಕರುಣೆ, ಸಹಾನುಭೂತಿಗಳಿದ್ದುವು. ಆನಿ ಬೆಸೆಂಟ್‌ಳ ಹೃದಯ ಕೂಡ ಇಂಥ ಕರುಣೆ, ಸಹಾನುಭೂತಿಗಳಿಂದ ತುಂಬಿ ತುಳುಕುತ್ತಿತ್ತೆಂಬುದನ್ನು ನಾವು ಈಗಾಗಲೇ ಕಂಡಿದ್ದೇವೆ. ಆಕೆ ಬ್ರಹ್ಮಜ್ಞಾನ ಸಮಾಜವನ್ನು ಸೇರಿ ಅದಕ್ಕಾಗಿ ತನ್ನ ಸೇವೆಯನ್ನು ಮೀಸಲು ಮಾಡಿದ ಮೇಲೆ ಕೂಡ, ಕೂಲಿಗಾರರ ಸ್ಥಿತಿಗತಿಗಳನ್ನು ಉತ್ತಮಗೊಳಿಸಲು, ದೀನ ದಲಿತರ ಕಷ್ಟ ಕಾರ್ಪಣ್ಯಗಳನ್ನು ಪರಿಹರಿಸಲು ನಿರಂತರವಾಗಿ ಶ್ರಮಿಸುತ್ತಿದ್ದಳು.

ಆನಿ ಬೆಸೆಂಟ್‌ಳ ಕಾರ್ಯಶ್ರದ್ಧೆ, ಕಾರ್ಯದಕ್ಷತೆಗಳು ಎಷ್ಟು ಅಸಮಾನ ವಾದುವೆಂಬುದನ್ನು ನಾವು ಕಂಡಿದ್ದೇವೆ.

ಆಕೆ ಕ್ರೈಸ್ತಧರ್ಮಾವಲಂಬಿಯಾಗಿದ್ದಾಗ, ಆ ಧರ್ಮವನ್ನು ಅರ್ಥಮಾಡಿ ಕೊಳ್ಳಲು, ಶ್ರದ್ಧೆಯಿಂದ ಅದನ್ನು ಆಚರಣೆ ತರಲು ಆಕೆ ಎಷ್ಟು ಶ್ರಮಿಸಿದಳೋ,

ಅಷ್ಟೇ ಆಸಕ್ತಿಯನ್ನು ಶ್ರದ್ಧೆಯನ್ನು ಅವಳು ನಿರೀಶ್ವರವಾದಿಯಾದಾಗಲೂ ತೋರಿದಳು—ಆ ಸಿದ್ಧಾಂತದ ವಿಚಾರವಾಗಿ. ಆಕೆ ಸ್ವತಂತ್ರ ವಿಚಾರವಾದಿ ಯಾಗಿದ್ದಾಗಲೂ ಹಾಗೆಯೇ. ಸಮತಾವಾದಿಯಾದಾಗಲೂ ಅಷ್ಟೇಯೆ. ಕಾರ್ಯಶ್ರದ್ಧೆ, ಕಾರ್ಯದಕ್ಷತೆ ಆಕೆಯ ಜೀವಕ್ಕಂಟಿದ ಗುಣಗಳೆಂದರೆ ತಪ್ಪೂ ಅಲ್ಲ. ಉತ್ಪ್ರೇಕ್ಷೆಯೂ ಅಲ್ಲ.

ಆನಿ ಬೆಸೆಂಟ್ ಬ್ರಹ್ಮಜ್ಞಾನ ಸಮಾಜವನ್ನು ಸೇರಿದಮೇಲೆ, ಆ ಸಮಾಜದ ಕೆಲಸವನ್ನು ತನ್ನ ಪ್ರಧಾನಕಾರ್ಯವನ್ನಾಗಿ ಮಾಡಿಕೊಂಡಳು. ತನ್ನ ಬ್ರಹ್ಮಜ್ಞಾನ, ಆತ್ಮಶಕ್ತಿಗಳನ್ನು ಬೆಳೆಸಿಕೊಳ್ಳುವುದರಲ್ಲೂ ಬ್ರಹ್ಮಜ್ಞಾನ ಸಮಾಜದ ತತ್ವಗಳನ್ನು ಪ್ರಚಾರ ಮಾಡುವುದರಲ್ಲಿಯೂ ಆಕೆ ನಿರತಳಾದಳು.

೧೮೯೦ನೇ ಬೇಸಿಗೆಯಲ್ಲಿ, ಬ್ಲವಾಟ್‌ಸ್ಕಿಯವರು ವಾಸಿಸುತ್ತಿದ್ದ ಲಾನ್ಸ್‌ಡೌನ್ ರಸ್ತೆಯ ಮನೆಯ ಕರಾರು ಮುಗಿದುದರಿಂದ, ಅವರ ನಿವಾಸ ವನ್ನು ಅವಿನ್ಯೂ ರಸ್ತೆಯಲ್ಲಿದ್ದ ಕಟ್ಟಡವೊಂದಕ್ಕೆ ಬದಲಾಯಿಸಬೇಕೆಂದೂ, ಈ ಕಟ್ಟಡದಲ್ಲಿಯೇ ಬ್ರಹ್ಮಜ್ಞಾನ ಸಮಾಜದ ಐರೋಪ್ಯ ಕಾರ್ಯಾಲಯವನ್ನು ನಡೆಸಬೇಕೆಂದೂ ನಿರ್ಣಯಿಸಲಾಯಿತು. ಸಭೆಗಳನ್ನು ನಡೆಸಲು ಅನುಕೂಲ ವಾಗುವಂತೆ ಈ ಕಟ್ಟಡಕ್ಕೆ ಸೇರಿದಂತೆ ಒಂದು ಸಭಾ ಭವನವನ್ನೂ ಕಟ್ಟ ಲಾಯಿತು. ಇದಲ್ಲದೆ, ಬ್ರಹ್ಮಜ್ಞಾನ ಸಮಾಜಕ್ಕಾಗಿ ಸದಾಕಾಲವೂ ದುಡಿಯು ತ್ತಿದ್ದವರೆಲ್ಲರೂ ಈ ಕಟ್ಟಡದಲ್ಲಿಯೇ ವಾಸಿಸುವುದೆಂದೂ ಗೊತ್ತಾಯಿತು. ಅದರಂತೆ ಜೂಲೈ ತಿಂಗಳಿನಲ್ಲಿ ಬ್ಲವಾಟ್‌ಸ್ಕಿಯವರು ಮೊದಲುಗೊಂಡು ಆಕೆಯ ಸಮೀಪವರ್ತಿಗಳಾಗಿದ್ದ ಸಮಾಜದ ಕೆಲಸಗಾರರೆಲ್ಲರೂ ಅವಿನ್ಯೂ ರಸ್ತೆಯ ಕಟ್ಟಡಕ್ಕೆ ಬಂದರು. ಆನಿ ಬೆಸೆಂಟ್ ತಾನೂ ಈ ಕೆಲಸಗಾರ್ರ ರೊಡನೆಯೇ ವಾಸಿಸುವುದೆಂದು ನಿರ್ಣಯಿಸಿ ಆ ಕಟ್ಟಡಕ್ಕೇ ಬಂದು ವಾಸಿಸ ತೊಡಗಿದಳು. ಅಲ್ಲಿ—ಊಟ ತಿಂಡಿ ಹೊತ್ತುಬಿಟ್ಟರೆ– ಬೆಳಗ್ಗೆ ಎಂಟರಿಂದ ರಾತ್ರಿ ಏಳುಗಂಟೆಯವರೆಗೆ ಕಾರ್ಯಕರ್ತರು ಸಮಾಜದ ಕೆಲಸಗಳನ್ನು ನೋಡಿ ಕೊಳ್ಳುತ್ತಿದ್ದರು. ಏಳುಗಂಟೆಗೆ ಸರಿಯಾಗಿ ರಾತ್ರಿಯ ಊಟ ಸಿದ್ಧವಾಗಿರು ತ್ತಿತ್ತು. ಊಟ ಮುಗಿದ ಮೇಲೆ ಕಾರ್ಯಕರ್ತರೆಲ್ಲರೂ, ಬ್ಲವಾಟ್‌ಸ್ಕಿ ಯವರ ಕೊಟಡಿಯಲ್ಲಿ ನೆರೆಯುತ್ತಿದ್ದರು. ಆಕೆಯ ಉಪದೇಶಗಳನ್ನು

ಕೇಳುತ್ತಿದ್ದರು. ತಮ್ಮ ಸಂದೇಹಗಳನ್ನು ಪರಿಹರಿಸಿಕೊಳ್ಳುತ್ತಿದ್ದರು. ಸಮಾಜದ ಕೆಲಸ ಕಾರ್ಯಗಳ ಸಂಬಂಧದಲ್ಲಿ ಆಕೆಯ ಸಲಹೆ ಸೂಚನೆಗಳನ್ನು ಪಡೆಯುತ್ತಿದ್ದರು.

ಅವಿನ್ಯೂ ರಸ್ತೆಯ ಕಟ್ಟಡಕ್ಕೆ ಬಂದು ಹತ್ತು ತಿಂಗಳಾಗುವ ಹೊತ್ತಿಗೆ-೧೮೯೧ನೇ ಮೇ ಎಂಟನೇ ತಾರೀಖು ಮೇಡಂ ಬ್ಲವಾಟ್‌ಸ್ಕಿಯವರು ವಿಧಿವಶರಾದರು. ಆಗ ಬ್ರಹ್ಮಜ್ಞಾನಸಮಾಜದ ಸಹಸ್ಥಾಪಕರೂ ಅಧ್ಯಕ್ಷರೂ ಆದ ಆಲ್ಕಾಟ್‌ರವರು ಅಸ್ಟ್ರೇಲಿಯಾದಲ್ಲಿದ್ದರು. ಆದ್ದರಿಂದ ಲಂಡನ್ನಿನಲ್ಲಿದ್ದ ಸಮಾಜದ ಐರೋಪ್ಯ ಕಾರ್ಯಾಲಯದ ರಕ್ಷಣೆ ಮತ್ತು ವ್ಯವಸ್ಥೆ ಆನಿ ಬೆಸೆಂಟ್‌ರವರ ಮೇಲೆ ಬಿತ್ತು. ಆಕೆ ಅದನ್ನು ತುಂಬಾ ದಕ್ಷತೆಯಿಂದ ನಿರ್ವಹಿಸಿದರೆಂದು ಹೇಳಬಹುದು. ಬ್ಲವಾಟ್‌ಸ್ಕಿಯವರು ವಿಧಿವಶರಾದ ಮೇಲೆ ಆ ಸುದ್ದಿಯನ್ನು ಆಸ್ಟ್ರೇಲಿಯಾದಲ್ಲಿದ್ದ ಆಲ್ಕಾಟ್‌ರವರಿಗೆ ತಿಳಿಸಿ, ಅವರನ್ನು ಲಂಡನ್‌ಗೆ ಬರಮಾಡಿಕೊಂಡುದಲ್ಲದೆ, ಅವರು ಅಲ್ಲಿಗೆ ಬರುವ ಹೊತ್ತಿಗೆ ಸರಿಯಾಗಿ ಬ್ರಹ್ಮಜ್ಞಾನ ಸಮಾಜದ ಐರೋಪ್ಯ ವಿಭಾಗದ ಮಹಾ ಸಭೆಯನ್ನು ಕೂಡಿಸಿ, ಸಮಾಜದ ಸಂಘಟನೆಯಲ್ಲಿ ಬಲ ತಪ್ಪದಂತೆ, ಐಕ್ಯತೆ ಹೆಚ್ಚುವಂತೆ ಮಾಡಿದರು.

ಬ್ಲವಾಟ್‌ಸ್ಕಿಯವರ ನಿಧನಾನಂತರ, ಸಮಾಜ ನಿರ್ವಹಣೆಯಲ್ಲಿ ಆಕೆ ವಹಿಸಿಕೊಂಡಿದ್ದ ಹೊಣೆಗಾರಿಕೆಗಳಲ್ಲಿ ಬಹುಭಾಗ ಆನಿ ಬೆಸೆಂಟ್‌ರ ಮೇಲೆ ಬಿತ್ತು. ಅವರು ಈ ಹೊಣೆಗಾರಿಕೆಯನ್ನು ಹೊತ್ತಿದ್ದಲ್ಲದೆ, ಅಮೇರಿಕದಲ್ಲಿ ಪ್ರವಾಸ ಮಾಡಿ ಅಲ್ಲಿ ಸಮಾಜದ ಬಗ್ಗೆ ಪ್ರಚಾರ ನಡೆಸಿದರು. ಅಂದು ಸಮಾಜದ ಆರ್ಥಿಕ ಸ್ಥಿತಿ ಅಷ್ಟೇನು ಸಮರ್ಪಕವಾಗಿರಲಿಲ್ಲವಾದ್ದರಿಂದ, ಆನಿ ಬೆಸೆಂಟ್ ತಮ್ಮ ಭಾಷಣ, ಲೇಖನಗಳಿಂದ ಬಂದ ಹಣದ ಬಹುಭಾಗವನ್ನು ಸಮಾಜದ ಐರೋಪ್ಯ ಕಾರ್ಯಾಲಯವನ್ನು ಲಂಡನ್ನಿನ 'ಬ್ಲವಾಟ್‌ಸ್ಕಿ ಮಂದಿರ'ವನ್ನು ನಡೆಸಲೂ ವೆಚ್ಚ ಮಾಡುತ್ತಿದ್ದರು.

ಸಮಾಜದ ಅಧ್ಯಕ್ಷರಾದ ಆಲ್ಕಾಟ್‌ರವರು ೧೮೯೧ ನೇ ಸೆಪ್ಟೆಂಬರ್ ೫ ನೇ ತಾರೀಖು ಆನಿ ಬೆಸೆಂಟ್‌ರನ್ನು ಮೊದಲಬಾರಿ ಸಂಧಿಸಿ ಮಾತನಾಡಿದೊಡನೆಯೇ ಆಕೆಯಲ್ಲಿ ವಿಪುಲ ಆಧ್ಯಾತ್ಮಿಕ ಶಕ್ತಿ ಸುಪ್ತವಾಗಿದೆಯೆಂಬುದನ್ನು ಕಂಡುಕೊಂಡರು. ಮೊದಲಿನಿಂದಲೂ ಆಕೆಯ ಮೇಲೆ ವಿಶೇಷ ವಿಶ್ವಾಸವನ್ನು

ತೋರಿದ್ದರು. ಆಕೆಯ ವೈದುಷ್ಯ, ಕಾರ್ಯಶ್ರದ್ಧೆ, ಕಾರ್ಯನಿಷ್ಠೆಗಳು ಅವರನ್ನು ಆಕರ್ಷಿಸಿದ್ದುವು. ಆದ್ದರಿಂದ ೧೮೯೩ ರಲ್ಲಿ ಚಿಕಾಗೋ ನಗರದಲ್ಲಿ ನಡೆದ ಜಗತ್ತಿನ ವಿಶ್ವಧರ್ಮ ಪರಿಷತ್‌ನಲ್ಲಿ ಬ್ರಹ್ಮಜ್ಞಾನ ಸಮಾಜದ ಪರವಾಗಿ ಮಾತನಾಡಲು ಅವರು ಆನಿ ಬೆಸೆಂಟ್‌ರವರನ್ನು ವಿಶೇಷ ಪ್ರತಿನಿಧಿಯಾಗಿ ಕಳುಹಿಸಿದರು.

ಈ ಸಂಬಂಧದ ಅಮೆರಿಕಾ ಪ್ರವಾಸ ಮುಗಿದ ಮೇಲೆ ಆನಿ ಬೆಸೆಂಟ್ ಕೊಲಂಬೋಗೆ ಬಂದು, ಸಿಂಹಳ ದ್ವೀಪದಲ್ಲಿ ಕೆಲವು ಭಾಷಣಗಳನ್ನು ಮಾಡಿ, ಅನಂತರ ನವೆಂಬರ್ ಹದಿನಾರನೇ ತಾರೀಖು ಪ್ರಾತಃಕಾಲ ಹತ್ತು ಗಂಟೆ ಇಪ್ಪತ್ತನಾಲ್ಕು ನಿಮಿಷಕ್ಕೆ ತುತ್ತುಕುಡಿಯಲ್ಲಿ ಭಾರತ ಭೂಸ್ಪರ್ಶ ಮಾಡಿದರು. ಬ್ಲವಾಟ್‌ಸ್ಕಿಯವರ ಪರಿಚಯವಾದಾಗಿನಿಂದ ಭಾರತವರ್ಷ ತಮ್ಮ ನಿಜ ಮಾತೃಭೂಮಿಯೆಂದು ಭಾವಿಸಿದ್ದ ಆನಿ ಬೆಸೆಂಟ್‌ರವರಿಗೆ, ಭಾರತ ವರ್ಷದಲ್ಲಿ ಅಡಿಯಿಟ್ಟುದು ತುಂಬಾ ಆನಂದವನ್ನುಂಟುಮಾಡಿತು.

ಆನಿ ಬೆಸೆಂಟ್‌ರು ಭಾರತವರ್ಷದಲ್ಲಿ ಕಾಲಿಟ್ಟ ದಿನ ಅವರ ಜೀವನದಲ್ಲಿ ಒಂದು ಮಹತ್ವದದಿನ. ಆಧುನಿಕ ಭಾರತದ ಇತಿಹಾಸದಲ್ಲೂ ಒಂದು ಮುಖ್ಯದಿನ.

ಆಕೆ ಮೊದಲುಬಾರಿ ಇಂಡಿಯಾಕ್ಕೆ ಬಂದಾಗ ಇಲ್ಲಿ ದೀರ್ಘಕಾಲ ಉಳಿದುಕೊಳ್ಳಲಿಲ್ಲ. ನಾಲ್ಕು ತಿಂಗಳುಗಳು ಮಾತ್ರ ಇಲ್ಲಿದ್ದು ಅನಂತರ ಯೂರೋಪಿಗೆ ಪ್ರಯಾಣ ಮಾಡಿದರು.

ಇಲ್ಲಿದ್ದ ನಾಲ್ಕು ತಿಂಗಳುಗಳಲ್ಲಿ ಅವರು ಇಡೀ ಇಂಡಿಯಾ ದೇಶದಲ್ಲಿ ಪ್ರವಾಸಮಾಡಿ, ಹತ್ತಾರು ಮುಖ್ಯ ಪಟ್ಟಣಗಳಲ್ಲಿ, ಪ್ರಧಾನವಾಗಿ, ಆಧ್ಯಾತ್ಮಿಕ ವಿಚಾರಗಳನ್ನು ಕುರಿತು ಭಾಷಣ ಮಾಡಿದರು. ಆನಿ ಬೆಸೆಂಟ್‌ರು ಅಪ್ರತಿಮ ವಾಗ್ಮಿಯೆಂಬ ಅಂಶ ಎಲ್ಲೆಲ್ಲಿಯೂ ಪ್ರಚಾರವಾಗಿದ್ದುದರಿಂದಲೂ, ಜನರು ಅವರ ಆಗಮನವನ್ನು ಎರಡು ವರ್ಷಗಳಿಂದ ನಿರೀಕ್ಷಿಸುತ್ತಿದ್ದುದರಿಂದಲೂ, ಅವರು ಎಲ್ಲೆಲ್ಲೂ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸೇರಿ ಅವರಿಗೆ ಸ್ವಾಗತವನ್ನು ಕೋರಿ, ಅವರ ಭಾಷಣವನ್ನು ಕೇಳಿ ಆನಂದಿಸಿದರು.

ಆನಿ ಬೆಸೆಂಟ್‌ರು ಇಂಡಿಯಾಕ್ಕೆ ಬಂದದ್ದು ಇದೇ ಮೊದಲು ಬಾರಿ ಯಾದರೂ, ನಲವತ್ತಾರು ವರ್ಷಗಳಿಂದ ಐರೋಪ್ಯ ಪದ್ಧತಿಗಳನ್ನೇ ಅನು

ಸರಿಸುತ್ತಿದ್ದರಾದರೂ, ಇಲ್ಲಿಗೆ ಬಂದೊಡನೆ ಅವರು ಹಲವಾರು ಭಾರತೀಯ ಪದ್ಧತಿಗಳನ್ನು ಅನುಸರಿಸಲಾರಂಭಿಸಿದರು. ತಾವು ಜನ್ಮತಃ ಐರ್ಲೆಂಡಿನವರಾದರೂ, ಭಾರತವರ್ಷವೇ ತಮ್ಮ ಜನ್ಮಭೂಮಿಯೆಂದೂ ತಾವು ಭಾರತೀಯರೆಂದೂ ಭಾವಿಸಿಕೊಂಡರು. ಪೂರ್ವ ಜನ್ಮಗಳಲ್ಲಿ ಅನೇಕಸಾರಿ ತಾವು ಇಂಡಿಯಾದಲ್ಲಿ ಹುಟ್ಟಿ ಬಾಳಿದುದಾಗಿಯೂ, ಆ ಜನ್ಮಗಳಲ್ಲಿ ಗಣನೀಯ ಆಧ್ಯಾತ್ಮಿಕ ಪ್ರಗತಿಯನ್ನು ಪಡೆದುದಾಗಿಯೂ ಅವರು ನಂಬಿದ್ದರು ಮತ್ತು ಆ ನಂಬುಗೆಯ ಆಧಾರದಮೇಲೆ—ತಾವು ಎಲ್ಲೇ ಹುಟ್ಟಿರಲಿ—ತಮ್ಮ ನಿಜ ಜನ್ಮಭೂಮಿ ಭಾರತವರ್ಷವೇ ಎಂದು ಗಣಿಸಿದ್ದರು.

ಮೊದಲ ಬಾರಿ ಇಂಡಿಯಾಕ್ಕೆ ಬಂದು ಹಿಂದಿರುಗಿದಮೇಲೆ, ಆನಿ ಬೆಸೆಂಟ್‌ರವರು ಆಸ್ಟ್ರೇಲಿಯಾ ಮತ್ತು ನ್ಯೂಜಿಲೆಂಡ್‌ಗಳಲ್ಲಿ ಪ್ರವಾಸ ಮಾಡಿ, ಬ್ರಹ್ಮಜ್ಞಾನ ಸಮಾಜದ ವಿಚಾರವಾಗಿಯೂ, ಭಾರತೀಯ ಧರ್ಮ, ಸಂಸ್ಕೃತಿಗಳ ವಿಚಾರವಾಗಿಯೂ ಪ್ರಚಾರ ಭಾಷಣಗಳನ್ನು ಮಾಡಿದರು. ಆ ಪ್ರವಾಸ ಮುಗಿದಮೇಲೆ ಇಂಡಿಯಾಕ್ಕೆ ಹಿಂದಿರುಗಿದರು. ಅವರು ಇಂಡಿಯಾದಲ್ಲಿದ್ದಾಗ, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನ ಅಧಿವೇಶನ ಸೇರಿತು. ಆನಿ ಬೆಸೆಂಟ್ ಅದರಲ್ಲಿ ಭಾಗವಹಿಸಿ ಭಾಷಣಮಾಡಿದರು. ಆದರೆ ಅಂದು ಅವರಿಗೆ ಭಾರತೀಯ ರಾಜಕೀಯದಲ್ಲಿ ನೇರವಾದ ಆಸಕ್ತಿಯಿರಲಿಲ್ಲ. ಅಂದರೆ ರಾಜಕೀಯ ಚಳವಳಿಯಲ್ಲಿ ಭಾಗವಹಿಸಲು ಅವರು ಮನಸ್ಸು ಮಾಡಿರಲಿಲ್ಲ. ಭಾರತವರ್ಷವು ಸ್ವತಂತ್ರ ರಾಷ್ಟ್ರವಾಗಬೇಕೆಂಬುದು ಅವರ ಅಪೇಕ್ಷೆಯಾಗಿತ್ತಾದರೂ, ಆ ಸ್ವಾತಂತ್ರ್ಯ ಸಾಧನೆಗೆ ಅಸ್ತಿವಾರವಾಗಿ, ಭಾರತೀಯರು ತಮ್ಮ ಧರ್ಮ, ಸಂಸ್ಕೃತಿ ಮತ್ತು ಪೂರ್ವಸಾಧನೆಗಳ ಹಿರಿಮೆಯನ್ನರಿತು, ತಮ್ಮ ಘನತೆಯನ್ನು ಅರ್ಥ ಮಾಡಿಕೊಂಡು, ಅದಕ್ಕೆ ತಕ್ಕಂತೆ ನಡೆದುಕೊಳ್ಳುವುದನ್ನು ಕಲಿಯುವುದು ಅವಶ್ಯಕವೆಂದು ಅವರು ಭಾವಿಸಿದ್ದರು. ಆದ್ದರಿಂದ ಹಿಂದೂ ಸಂಸ್ಕೃತಿಯ ಪುನರುಜ್ಜೀವನಕ್ಕಾಗಿ ದುಡಿಯುವುದು ತಮ್ಮ ಪ್ರಥಮ ಕರ್ತವ್ಯವೆಂದು ಅವರು ನಿರ್ಧರಿಸಿದರು.

ಈ ನಿರ್ಧಾರದ ಪ್ರಥಮ ಪರಿಣಾಮವಾಗಿ ಅವರು, ಇಂಡಿಯಾ ದೇಶವನ್ನು ತಮ್ಮ ಪ್ರಧಾನ ಕಾರ್ಯಕ್ಷೇತ್ರವಾಗಿ ಮಾಡಿಕೊಂಡು, ಅಲ್ಲಿಯೇ ನೆಲೆಸಬೇಕೆಂದು ಮನಸ್ಸು ಮಾಡಿದರು.

ಇಂಡಿಯಾ ದೇಶದಲ್ಲಿ ಎಲ್ಲಿ ನೆಲೆಸುವುದು? —ಹಿಂದೂಗಳಿಗೆಲ್ಲ ಪವಿತ್ರವಾದ ಕಾಶೀ ಕ್ಷೇತ್ರದಲ್ಲಿ. —ಆಧ್ಯಾತ್ಮಿಕ ಚಿಂತನೆ, ಅಭ್ಯಾಸಗಳಿಗೆ ಮತ್ತು ಭಾರತೀಯ ಸಂಸ್ಕೃತಿಯ ಸಂಪೂರ್ಣ ದರ್ಶನವನ್ನು ಕಾಣುವುದಕ್ಕೆ ಅದು ತಕ್ಕ ಸ್ಥಳವೆಂದು ತೋರಿತು.

ಆದ್ದರಿಂದ ಆನಿ ಬೆಸೆಂಟ್‌ರವರು ೧೮೯೫ನೇ ಜನವರಿಯಲ್ಲಿ ಕಾಶಿಯಲ್ಲಿ ಒಂದು ಮನೆ ಮಾಡಿಕೊಂಡು ಅಲ್ಲಿ ವಾಸ ಮಾಡಲಾರಂಭಿಸಿದರು. ಸಂಸ್ಕೃತ ಜ್ಞಾನವಿಲ್ಲದೆ, ಹಿಂದೂಗಳ ಧರ್ಮ, ಸಂಸ್ಕೃತಿಗಳ ನೈಜ ಮತ್ತು ಸಂಪೂರ್ಣ ಜ್ಞಾನ ದೊರೆಯುವುದು ದುರ್ಲಭವೆಂದು ಅರಿತು, ಸಂಸ್ಕೃತ ಭಾಷೆಯನ್ನು ಅಧ್ಯಯನ ಮಾಡಿದರು. ಹಿಂದೂ ಧರ್ಮಶಾಸ್ತ್ರ, ಪುರಾಣ, ವೇದ ವೇದಾಂತಗಳನ್ನು ಅಭ್ಯಾಸ ಮಾಡಿದರು. ಶ್ರೀಮದ್ಭಗವದ್ಗೀತೆಯನ್ನು ಸರಳವಾದ ಗದ್ಯದಲ್ಲಿ ಇಂಗ್ಲಿಷ್ ಭಾಷೆಗೆ ಭಾಷಾಂತರ ಮಾಡಿದರು.

ಹಿಂದೂ ಶಾಸ್ತ್ರಾಧ್ಯಯನಾದಿ ಕಾರ್ಯಗಳು ನಿರಂತರವಾಗಿ ನಡೆಯುತ್ತಿದ್ದುವಾದರೂ, ಆನಿ ಬೆಸೆಂಟ್‌ರು ಅದೊಂದು ಕೆಲಸಕ್ಕೇ ತಮ್ಮೆಲ್ಲ ವ್ಯವಧಾನವನ್ನೂ ಮೀಸಲು ಮಾಡಲಿಲ್ಲ. ತಮ್ಮ ಪ್ರಧಾನ ಕರ್ತವ್ಯವಾಗಿದ್ದ ಬ್ರಹ್ಮಜ್ಞಾನ ಸಮಾಜದ ಪ್ರಚಾರಸೇವೆಗೂ ತಮ್ಮ ಅಮೌಲ್ಯ ಕಾಲದ ಗಣನೀಯ ಭಾಗವನ್ನು ವಿನಿಯೋಗಿಸುತ್ತಿದ್ದರು.

ಕಾಶೀ ಕ್ಷೇತ್ರದಲ್ಲಿ ನೆಲೆಸಿದ ಕೆಲವು ತಿಂಗಳುಗಳ ಅನಂತರ, ಅವರು ಇಂಗ್ಲೆಂಡಿಗೆ ಹೋಗಿ ಭಾಷಣಗಳನ್ನು ಮಾಡಿದರು. ತಮ್ಮ ಮತ್ತು ಬ್ರಹ್ಮಜ್ಞಾನ ಸಮಾಜದ ಅಧ್ಯಕ್ಷರಾದ ಕರ್ನಲ್ ಆಲ್ಕಾಟ್‌ರವರ ವಿಚಾರವಾಗಿ ವಿರೋಧಿಗಳು ನಡೆಸುತ್ತಿದ್ದ ಅಪಪ್ರಚಾರವನ್ನು ಧೈರ್ಯವಾಗಿ ಇದಿರಿಸಿ ಹೋರಾಡಿದರು.

ಅನಂತರ ಆ ವರ್ಷದ ಕೊನೆಯಲ್ಲಿ ಇಂಡಿಯಾಕ್ಕೆ ಹಿಂದಿರುಗಿ, ನಾಲ್ಕೈದು ತಿಂಗಳುಗಳು ಇಲ್ಲಿದ್ದು, ಮತ್ತೆ ಇಂಗ್ಲೆಂಡ್, ಹಾಲೆಂಡ್‌ಗಳಲ್ಲಿ ಕೆಲವು ತಿಂಗಳುಗಳು ಪ್ರವಾಸಮಾಡಿ, ಪುನಃ ಇಂಡಿಯಾಕ್ಕೆ ಬಂದರು.

ಹೀಗೆ ಪ್ರತಿವರ್ಷದಲ್ಲಿಯೂ, ಕೆಲವು ತಿಂಗಳುಗಳು ಇಂಡಿಯಾದಲ್ಲಿ ದು ಕೆಲಸ ಮಾಡುವುದು, ಮತ್ತೆ ಕೆಲವು ತಿಂಗಳುಗಳು ಇಂಡಿಯಾದ ಹೊರಗೆ ಬೇರೆ ಬೇರೆ ದೇಶಗಳಲ್ಲಿ ಪ್ರವಾಸಮಾಡಿ, ಇಂಡಿಯಾದ ಸ್ವಾತಂತ್ರ್ಯ, ಧರ್ಮ,

ಸಂಸ್ಕೃತಿಗಳ ವಿಚಾರವಾಗಿಯೂ, ಬ್ರಹ್ಮಜ್ಞಾನ ಸಮಾಜದ ವಿಚಾರವಾಗಿ ಭಾಷಣ ಮಾಡುವುದೂ, ಹೋದಲ್ಲೆಲ್ಲಾ ಬ್ರಹ್ಮಜ್ಞಾನ ಸಮಾಜಗಳನ್ನೂ ಮಂದಿರಗಳನ್ನೂ ಸ್ಥಾಪಿಸುವುದೂ ಆನಿ ಬೆಸೆಂಟ್‌ರ ನಿರ್ದಿಷ್ಟ ಕಾರ್ಯಕ್ರಮವಾಗಿತ್ತು. ಅವರ ಬಾಳುವೆಯ ಕೊನೆಯಲ್ಲಿ ಅವರ ದೇಹಶಕ್ತಿ ತುಂಬಾ ಕುಗ್ಗಿದ್ದ ಮೂರು ವರ್ಷಗಳನ್ನು ಬಿಟ್ಟರೆ, ಅಂದರೆ ಅವರ ಎಂಭತ್ತಮೂರನೆಯ ವರ್ಷದವರೆವಿಗೂ ಅವರು ಈ ನಿರ್ದಿಷ್ಟ ಕಾರ್ಯಕ್ರಮವನ್ನು ತಪ್ಪದೆ ನಡೆಸಿಕೊಂಡು ಬಂದರು.

ಆನಿ ಬೆಸೆಂಟ್‌ರವರು ಕಾಶಿಯನ್ನು ತಮ್ಮ ನೆಲೆಯನ್ನಾಗಿ ಮಾಡಿಕೊಂಡ ಮೇಲೆ, ಮೂರು ಮೂರೂವರೆ ವರ್ಷಗಳವರೆಗೆ, ಭಾರತೀಯ ಸಮಸ್ಯೆಗಳನ್ನು ಕುರಿತು ನಿಶ್ಚಿತವಾದ ಕಾರ್ಯಕ್ರಮಗಳನ್ನು ಕೈಗೊಳ್ಳುವುದು ಸಾಧ್ಯವಾಗಲಿಲ್ಲ. ಏಕೆಂದರೆ, ಆನಿ ಬೆಸೆಂಟ್‌ರವರು ಕಾಶಿಯಲ್ಲಿ ನೆಲೆಸಿದ್ದರೂ, ಇಂಗ್ಲೆಂಡ್, ಯೂರೋಪ್, ಅಮೆರಿಕಾಗಳಲ್ಲಿ ಬ್ರಹ್ಮಜ್ಞಾನ ಸಮಾಜದ ವ್ಯವಸ್ಥೆಯ ಸಂಬಂಧದಲ್ಲಿ ಅವರು ಮಾಡಬೇಕಾದ ಕೆಲಸಗಳು ಬಹಳವಿದ್ದುವು.

ಆದ್ದರಿಂದ ಅವರು ೧೮೯೬, ೧೮೯೭ರಲ್ಲಿ ಅನೇಕ ತಿಂಗಳುಗಳನ್ನು ಯೂರೋಪ್ ಅಮೆರಿಕಾಗಳಲ್ಲಿ ಕಳೆದರು. ಆದರೂ ಈ ಕಾಲದಲ್ಲಿ ಕೂಡ ಅವರು ಇಂಡಿಯಾದಲ್ಲಿ ತಾವು ಕೈಗೊಳ್ಳಬೇಕಾದ ಕಾರ್ಯಕ್ರಮವನ್ನು ಕುರಿತು ತೀವ್ರವಾಗಿ ಯೋಚಿಸುತ್ತಿದ್ದರೆಂದು ಧಾರಾಳವಾಗಿ ಹೇಳಬಹುದು.

ಏಕೆಂದರೆ, ಅವರು ೧೮೯೮ರ ಆರಂಭದಲ್ಲಿ ತಮ್ಮ ಐರೋಪ್ಯ ಪ್ರವಾಸವನ್ನು ಮುಗಿಸಿ ಏಪ್ರಿಲ್ ೩ನೇ ತಾರೀಖು ಕಾಶೀಕ್ಷೇತ್ರಕ್ಕೆ ಹಿಂದಿರುಗಿದೊಡನೆಯೇ ಆ ಕ್ಷೇತ್ರದಲ್ಲಿ "ಸೆಂಟ್ರಲ್ ಹಿಂದೂ ಕಾಲೇಜ್" ಎಂಬ ಪ್ರೌಢ ವಿದ್ಯಾ ಕೇಂದ್ರವನ್ನು ಸ್ಥಾಪಿಸುವ ಪ್ರಯತ್ನವನ್ನು ಕೈಗೊಂಡರು; ಮೂರು ತಿಂಗಳಲ್ಲಿ ತಮ್ಮ ಈ ಪ್ರಯತ್ನವನ್ನು ಕಾರ್ಯರೂಪಕ್ಕೆ ತಂದು ಜುಲೈ ೭ನೇ ತಾರೀಖಿನ ದಿನ ಕಾಲೇಜನ್ನು ಆರಂಭ ಮಾಡಲು ವ್ಯವಸ್ಥೆ ಮಾಡಿ ಜೂನ್ ತಿಂಗಳಲ್ಲಿ ಇಂಗ್ಲೆಂಡಿಗೆ ಹಿಂದಿರುಗಿ, ಜುಲೈ ತಿಂಗಳಿಂದ ಆಗಸ್ಟ್ ಮಧ್ಯಭಾಗದವರೆಗೆ ಲಂಡನ್‌ನಲ್ಲಿ ಭಾಷಣ ಮಾಡಿ ಅನಂತರ ಕಾಶಿಗೆ ಹಿಂದಿರುಗಿದರು.

ಈ ಭಾಷಣಗಳಿಂದ ಸಂಗ್ರಹವಾದ ಹಣದ ಬಹುಭಾಗ ಕಾಲೇಜಿನ

ವೆಚ್ಚಕ್ಕಾಗಿ ವಿನಿಯೋಗವಾಯಿತೆಂದು ಮತ್ತೆ ಹೇಳಬೇಕಾಗಿಲ್ಲ. ಇಂಡಿಯಾಕ್ಕೆ ಹಿಂದಿರುಗಿದ ಮೇಲೆ ಕೂಡ ಆನಿ ಬೆಸೆಂಟ್‌ರವರು ಇಲ್ಲಿನ ವಿವಿಧ ಪ್ರಾಂತಗಳಲ್ಲಿ ಪ್ರವಾಸಮಾಡಿ ಸೆಂಟ್ರಲ್ ಹಿಂದೂ ಕಾಲೇಜಿನ ಧ್ಯೇಯಗಳನ್ನು ಜನರಿಗೆ ವಿವರಿಸಿ, ಕಾಲೇಜಿನ ನಿಧಿಗಾಗಿ ತುಂಬಾ ಹಣ ಕೂಡಿಸಿದರು. ಈ ವಿದ್ಯಾ ಸಂಸ್ಥೆಯ ಸ್ಥಾಪನೆ, ಆನಿ ಬೆಸೆಂಟ್‌ರವರ ಭಾರತ ಸೇವಾಕಾರ್ಯಕ್ಕೆ ನಾಂದಿಯಾಯಿತೆನ್ನಬಹುದು.

## ೧೨

ಆನಿ ಬೆಸೆಂಟ್‌ರವರು ಇಲ್ಲಿಂದಾಚೆಗೆ ಭಾರತೀಯರ ಉದ್ಧಾರಕ್ಕಾಗಿ ಮೂವತ್ತು ವರ್ಷಗಳ ಕಾಲ ಅವಿಚ್ಛಿನ್ನವಾಗಿ ದುಡಿದರು; ವಿಶ್ರಾಂತಿಯನ್ನೇ ಅಪೇಕ್ಷಿಸದೆ ನಿರಂತರವಾಗಿ ದುಡಿದರು. ಅವರ ಸೇವೆಗೆ ಮೀಸಲಾದ ಕ್ಷೇತ್ರ ಒಂದೇ, ಎರಡೆ? ಭಾರತ ಜನಜೀವನದ ಎಲ್ಲಾ ಮುಖಗಳಲ್ಲೂ ಅವರು ಒಂದಲ್ಲ ಒಂದು ರೀತಿ ಸೇವೆ ನಡೆಸಿದ್ದಾರೆಂದರೆ, ಅದು ಅತಿಶಯೋಕ್ತಿಯಲ್ಲ. ಅಷ್ಟೊಂದು ಕಾರ್ಯರಂಗಗಳಲ್ಲಿ ಅಷ್ಟೊಂದು ಶ್ರದ್ಧೆ, ಆಸಕ್ತಿ ಮತ್ತು ದಕ್ಷತೆಗಳಿಂದ ದುಡಿದ ಇನ್ನು ಒಬ್ಬಿಬ್ಬರು ದೊರೆಯುವುದು ಕೂಡ ದುರ್ಲಭವೆಂದರೆ ತಪ್ಪಾಗಲಾರದು. ಅಂಥ ಅನುಪಮ, ಅಮೌಲ್ಯ ಸೇವೆಯನ್ನವರು ಭಾರತವರ್ಷಕ್ಕೆ, ಭಾರತೀಯರಿಗೆ ಸಲ್ಲಿಸಿದ್ದಾರೆ.

ಈ ಅಮೋಘಸೇವೆಯ ಪರಿಚಯ ಮಾಡಿಕೊಡುವ ಮೊದಲು, ಅವರ ಸೇವೆ ಆರಂಭವಾದಾಗ ಎಂದರೆ ಇಂದಿಗೆ ಐವತ್ತು ಅರವತ್ತು ವರ್ಷಗಳ ಹಿಂದೆ ನಮ್ಮ ದೇಶದ ಸ್ಥಿತಿ ಹೇಗಿತ್ತು; ನಮ್ಮ ಜನರ ಮನೋವೃತ್ತಿ ಹೇಗಿತ್ತು; ನಮ್ಮ ಜನಾಂಗವು ಮುಂದುವರೆದು, ಇಡೀ ಜಗತ್ತಿನ ಗೌರವಾದರಗಳಿಗೆ ಪಾತ್ರವಾಗುವ ಗುರಿಯನ್ನು ಮುಟ್ಟಲು ಇದ್ದ ಅಡಚಣೆಗಳೇನು ಎಂಬುದನ್ನು ಸ್ಥೂಲವಾಗಿಯಾದರೂ ತಿಳಿದುಕೊಳ್ಳುವುದು ಅವಶ್ಯಕ.

ರಾಜಕೀಯವಾಗಿ, ಭಾರತವರ್ಷ ಅಂದು ಸ್ವತಂತ್ರವಾಗಿರಲಿಲ್ಲ. ಅದು ಬ್ರಿಟಿಷ್ ಸಾಮ್ರಾಜ್ಯದ ಒಂದು ಅಂಗವಾಗಿತ್ತು. ಭಾರತವರ್ಷವನ್ನು "ಬ್ರಿಟಿಷ್ ರಾಣಿಯ ಕಿರೀಟದ ಅತ್ಯಂತ ಪ್ರಕಾಶಮಾನವಾದ ವಜ್ರ" ಎಂದು ಬ್ರಿಟಿಷರು ವರ್ಣಿಸುತ್ತಿದ್ದರೆಂಬುದು ನಿಜ. ಇಂಡಿಯಾ ದೇಶ ತಮ್ಮ ಸುಲಿಗೆಯ ದೃಷ್ಟಿಯಿಂದ ಎಷ್ಟು ಅಮೌಲ್ಯವಾದುದೆಂಬುದನ್ನು ವಿವರಿಸುವುದಕ್ಕಾಗಿ ಬ್ರಿಟಿಷರು ಹೇಳುತ್ತಿದ್ದ ಮಾತು ಅದು. ಅಷ್ಟೆಯೇ! ಭಾರತೀಯರೆಂದರೆ ಸ್ವಾತಂತ್ರ್ಯಕ್ಕೆ ಅನರ್ಹರಾದ ಅಸಂಸ್ಕೃತರೆಂಬ ಭಾವನೆ ಬ್ರಿಟಿಷರಿಗಿತ್ತು. ಭಾರತೀಯರನ್ನು ದರ್ಪದಿಂದ ಆಳಿ, ಅವರನ್ನು ಪೂರ್ಣವಾಗಿ ತಮ್ಮ ಹಿಡಿತದಲ್ಲಿಟ್ಟುಕೊಂಡು, ಅವರ ದುಡಿಮೆಯಿಂದ ಮತ್ತು ಅವರ ರಾಷ್ಟ್ರದ ಸಂಪತ್ತಿನಿಂದ

ಆದಷ್ಟು ಲಾಭವನ್ನು ಗಳಿಸುವುದೇ ಬ್ರಿಟಿಷರ ರಾಜ್ಯಭಾರದ ಪ್ರಧಾನ ನೀತಿಯಾಗಿತ್ತು. ತಮ್ಮ ಈ ಲಾಭಸಂಪಾದನೆಗೆ ಅಡಚಣೆ ತರುವಂಥ ಭಾರತೀಯ ಕೈಗಾರಿಕೆ, ಕಲೆ, ವಿದ್ಯೆ, ವ್ಯವಸ್ಥೆಗಳೆಲ್ಲವನ್ನು ಅವರು ಕ್ರಮವಾಗಿ ನಾಶ ಮಾಡಿದ್ದರಲ್ಲದೆ, ತರುಣ ಭಾರತೀಯರ ದೃಷ್ಟಿ ಆಕಡೆಗೆ ಹರಿಯದಂತಿರಲು ಕೂಡ ತಕ್ಕ ಎಚ್ಚರಿಕೆಯನ್ನು ಕೈಗೊಂಡಿದ್ದರು.

ಈ ವ್ಯವಸ್ಥೆಯಲ್ಲಿ, ಬ್ರಿಟಿಷರು ನಮ್ಮ ದೇಶದಲ್ಲಿ ಏರ್ಪಡಿಸಿದ ವಿದ್ಯಾಭ್ಯಾಸ ಪದ್ಧತಿ ಮುಖ್ಯವಾದದ್ದು. ಈ ಪದ್ಧತಿಯ ಉದ್ದೇಶ ದ್ವಿಮುಖವಾದದ್ದು; ಒಂದು: ಇಂಡಿಯಾ ದೇಶದಲ್ಲಿ ತಾವು ನಡೆಸುತ್ತಿದ್ದ ಆಡಳಿತದಲ್ಲಿ ಕಾರಕೂನರಾಗಿ ಸಹಾಯ ಮಾಡಲು ಭಾರತೀಯರಿಗೆ ಇಂಗ್ಲಿಷ್ ಓದು ಬರಹಗಳನ್ನು ಕಲಿಸುವುದು; ಈ ವ್ಯವಸ್ಥೆಯಲ್ಲಿ ಅವರು ತಮ್ಮ ಸಾಹಿತ್ಯ ಸಂಸ್ಕೃತಿಗಳನ್ನು ಮರೆಯುವಂತೆ, ನಿರ್ಲಕ್ಷಿಸುವಂತೆ ಅವ್ಯಕ್ತ ಪ್ರಯತ್ನ ನಡೆಸುವುದು. ಇನ್ನೊಂದು: ನೇರವಾಗಿ ಆಡಳಿತದ ಸಂಬಂಧವಿಲ್ಲದಿದ್ದರೂ, ಅದರ ಕೃಪಾಶ್ರಯ ರಕ್ಷಣೆಗಳನ್ನುಳ್ಳದ್ದು. ಅವ್ಯಕ್ತವಾದರೂ ಆಳವಾದ ಪರಿಣಾಮವುಳ್ಳದ್ದು. ಬ್ರಿಟಿಷರ ಭಾರತೀಯ ವಿದ್ಯಾ ವ್ಯವಸ್ಥೆಗೆ ಪೋಷಕವಾದದ್ದು, ಪ್ರೇರಕವಾದದ್ದು—ಕ್ರೈಸ್ತಪಾದ್ರಿಗಳ ಪ್ರಚಾರ.

ಬ್ರಿಟಿಷರು ರೂಪಿಸಿದ ವಿದ್ಯಾವ್ಯವಸ್ಥೆ, ಇಂಗ್ಲಿಷ್ ಸಾಹಿತ್ಯ, ಸಂಸ್ಕೃತಿಗಳ ಹಿರಿಮೆಯನ್ನು ಹೊಗಳಿ ಭಾರತೀಯ ವಿದ್ಯಾರ್ಥಿಗಳ ದೃಷ್ಟಿಯನ್ನು ಆ ಕಡೆ ಸೆಳೆದರೆ, ಕ್ರೈಸ್ತ ಪಾದ್ರಿಗಳ ಪ್ರಚಾರ ಭಾರತೀಯ ಧರ್ಮ, ಸಮಾಜ ವ್ಯವಸ್ಥೆ, ಪದ್ಧತಿ ನಂಬಿಕೆಗಳನ್ನು ಅಸಂಬದ್ಧ, ರೂಕ್ಷ, ಹೀನವೆಂದು ತೆಗಳಿ, ಭಾರತೀಯರ ಭಾರತೀಯತ್ವದ ಮೂಲಕ್ಕೇ ಕೊಡಲಿ ಹಾಕುತ್ತಿದ್ದುವು.

ಆನಿ ಬೆಸೆಂಟ್‌ರು ಬರುವ ಹೊತ್ತಿಗೆ ಈ ದ್ವಿಮುಖ ಕಾರ್ಯಕ್ರಮ ಸುಮಾರು ನಲವತ್ತು ವರ್ಷಗಳ ಕಾಲ ಯಶಸ್ವಿಯಾಗಿ ಕೆಲಸಮಾಡಿ, ಭಾರತೀಯರ ಆತ್ಮ ಗೌರವವನ್ನೂ, ಸ್ವಾತಂತ್ರ್ಯಾಕಾಂಕ್ಷೆಯನ್ನೂ ಕೆಲ ಮಟ್ಟಿಗೆ ನಾಶಗೊಳಿಸಿದ್ದಲ್ಲದೆ, ಬಹುಮಟ್ಟಿಗೆ ಹದಗೆಡಿಸಿದ್ದುವು.

ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದವರು ತಾವು ಭಾರತೀಯರೆಂದು ಹೇಳಿಕೊಳ್ಳುವುದಕ್ಕೆ ಕೂಡ ನಾಚಿಕೆಪಡುವಂಥ ಅಧಮ ನೈಚ್ಯಾನುಸಂಧಾನಕ್ಕೆ

ಬಲಿಯಾಗಿ ನರಳುತ್ತಿದ್ದರು. ಉಡಿಗೆ ತೊಡಿಗೆಗಳಲ್ಲಿ, ಊಟ ಉಪಚಾರ ಗಳಲ್ಲಿ, ನಡೆ ನುಡಿಗಳಲ್ಲಿ ಐರೋಪ್ಯರ ಅನುಕರಣೆ ಮಾಡುವುದೇ ಸುಸಂಸ್ಕೃತಿಯ ಲಕ್ಷಣವೆಂದೂ, ಅದೇ ತಮ್ಮ ವಿಮೋಚನೆಯ ಮಾರ್ಗ ವೆಂದೂ ಭಾವಿಸಿ ಆ ಮಾರ್ಗದಲ್ಲಿಯೇ ಧಾವಿಸುತ್ತಿದ್ದರು. ಇಂಗ್ಲಿಷ್ ವಿದ್ಯಾಭ್ಯಾಸವಿಲ್ಲದ, ಐರೋಪ್ಯ ಆಚರಣೆಗಳಿಲ್ಲದ ತಮ್ಮ ಅಣ್ಣತಮ್ಮಂದಿರ ಒಡನೆ ವ್ಯವಹರಿಸುವುದು ಕೂಡ ತಮ್ಮ ಗೌರವಕ್ಕೆ ಕುಂದೆಂಬ ಭಾವನೆ ಇಂಗ್ಲಿಷ್ ಕಲಿತ ಭಾರತೀಯರಲ್ಲಿ ಮನೆ ಮಾಡಿತ್ತು.

ಈ ಶೋಚನೀಯ ಪರಿಸ್ಥಿತಿ, ಭಾರತೀಯರಿಗೆ ಗೊತ್ತಿರಲಿಲ್ಲವೆಂದಲ್ಲ. ರಾಜಾರಾಮ್ ಮೋಹನ್ ರಾಯ್, ದೇವೇಂದ್ರನಾಥ ಠಾಕೂರ್, ಈಶ್ವರ ಚಂದ್ರ ವಿದ್ಯಾಸಾಗರರಂಥ ಗಣ್ಯ ಭಾರತೀಯರು, ಭಾರತೀಯರ ಆತ್ಮ ಗೌರವವನ್ನು ಪುನರುಜ್ಜೀವನ ಗೊಳಿಸಲು ಪ್ರಬಲ ಪ್ರಯತ್ನಗಳನ್ನು ನಡೆಸಿ ದ್ದರು. ಭಾರತೀಯರ ಹಿತಾಕಾಂಕ್ಷಿಗಳಾದ ಕೆಲಮಂದಿ ಐರೋಪ್ಯರ ಮತ್ತು ರಾಜಕೀಯ ದೃಷ್ಟಿಯುಳ್ಳ ಕೆಲಮಂದಿ ಭಾರತೀಯರ ಪ್ರಯತ್ನದ ಫಲವಾಗಿ ೧೮೮೫ರಲ್ಲಿ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಸ್ಥಾಪಿತವಾಗಿ ಭಾರತೀಯ ರಾಜಕೀಯ ವಿಮೋಚನೆಗಾಗಿ ಪ್ರಯತ್ನಿಸುತ್ತಿತ್ತು. ಆದರೆ, ಈ ಕಾರ್ಯ ಕ್ರಮಗಳು ಹದಗೆಡುತ್ತಿದ್ದ ನಮ್ಮ ಸಾಂಸ್ಕೃತಿಕ ಜೀವನವನ್ನು ಉತ್ತಮ ಗೊಳಿಸುವಷ್ಟು, ನಮ್ಮನ್ನು ದಿನದಿನಕ್ಕೆ ಬಲವಾಗಿ ಬಂಧಿಸುತ್ತಿದ್ದ ರಾಜಕೀಯ ಪಾಶವನ್ನು ಸಡಿಲಿಸುವಷ್ಟು ಪರಿಣಾಮಕಾರಿಯಾಗಿ ರೂಪುಗೊಂಡಿರಲಿಲ್ಲ. ಹೀಗಾಗಲು ಕಾರಣವೇನೆಂಬುದನ್ನು ಸ್ಫುಟವಾಗಿ ಆಲೋಚಿಸಿ, ಆ ಮೂಲ ಕಾರಣವನ್ನು ನಿವಾರಿಸಲು ಪ್ರಬಲವಾಗಿ, ಬಹುಮುಖವಾಗಿ ಶ್ರಮಿಸಿದ ಕೀರ್ತಿಯ ಬಹ್ವಂಶ ಆನಿ ಬೆಸೆಂಟ್‌ರಿಗೆ ಸೇರಿದ್ದು.

ಈವರೆಗೆ ಹೇಳಿದ್ದು ಈಗ್ಗೆ ಐವತ್ತುವರ್ಷಗಳ ಹಿಂದೆ ಇದ್ದ ನಮ್ಮ ರಾಷ್ಟ್ರಜೀವನದ ಒಂದು ಮುಖದ ವಿವರಣೆ. ಇದನ್ನು ಹೊರಮುಖ ಎನ್ನಬಹುದು. ಇನ್ನು ಒಳ ಮುಖದ ವಿಚಾರ: ನಮ್ಮ ಸಮಾಜದ ಲೋಪ ದೋಷಗಳು, ಅದರಲ್ಲಿದ್ದ ಒಡಕು ತೊಡಕುಗಳು—ಇವುಗಳ ವಿಚಾರ.

ಈ ಒಳ ಮುಖಕ್ಕೆ ಸಂಬಂಧಿಸಿದ ವಿಚಾರಗಳಲ್ಲೂ ಬ್ರಿಟಿಷ್ ಸರ್ಕಾರದ ಅವ್ಯಕ್ತ ಕೈವಾಡ ಬಲವಾಗಿದ್ದು, ಸಮಸ್ಯೆಗಳು ವಿಷಮಿಸಲು ಸಹಾಯಕ

ವಾದುವೆಂದರೆ ತಪ್ಪಲ್ಲ. ನಾನಾ ಜಾತಿ, ಕೋಮು, ಮತ ಪಂಥಗಳವರು ಅಣ್ಣ ತಮ್ಮಂದಿರಂತೆ ಬಾಳುತ್ತಿದ್ದುದು ತಪ್ಪಿ ಈ ವಿವಿಧ ಪಂಥ ಪಂಗಡಗಳಲ್ಲಿ ಒಳಒಡಕುಗಳೂ ಪರಸ್ಪರ ತೊಡಕುಗಳೂ ಬೆಳೆಯಲಾರಂಭವಾಗಿದ್ದುವು. "ಒಡೆದು ಆಳು" ಎಂಬ ಅನೀತಿಯನ್ನೇ ತಮ್ಮ ರಾಜನೀತಿಯನ್ನಾಗಿ ಅವಲಂಬಿಸಿದ್ದ ಬ್ರಿಟಿಷ್ ಆಳರಸರು, ನಮ್ಮ ರಾಷ್ಟ್ರದ ಐಕ್ಯತೆಯನ್ನು ನಾನಾ ತಂತ್ರಗಳಿಂದ ಭಂಗಿಸಲು ಪ್ರಯತ್ನಿಸಿ, ಆ ಪ್ರಯತ್ನ ಯಶಸ್ವಿಯಾಗುವ ಸೂಚನೆಗಳನ್ನು ಕಾಣುತ್ತಿದ್ದರು.

ಇತ್ತ ಪೂರ್ವದ ವಿದ್ಯಾಭ್ಯಾಸದ ವ್ಯವಸ್ಥೆ ನಾಶವಾಗಿತ್ತು. ಸಮಾಜದ ಎಲ್ಲ ಅಂಗಗಳನ್ನೂ ಮುಟ್ಟುವಂಥ ವಿದ್ಯಾ ವ್ಯವಸ್ಥೆಯನ್ನು ಬ್ರಿಟಿಷ್ ಆಡಳಿತ ಗಾರರು ನಿರ್ಮಿಸಿರಲಿಲ್ಲ. ನಿರ್ಮಿಸುವ ಅಪೇಕ್ಷೆಯಾಗಲೀ ಆಸಕ್ತಿಯಾಗಲೀ ಅವರಿಗಿರಲಿಲ್ಲ. ಹೀಗಾಗಿ ನಮ್ಮ ಹಳ್ಳಿಗಾಡುಗಳ ಜನ ಇತ್ತ ಅಕ್ಷರ ವಿದ್ಯೆಯೂ ಇಲ್ಲದೆ, ಅತ್ತ ಜೀವನದ ಹಾದಿಯನ್ನು ಸುಗಮ ಮಾಡುವ ಸಂಸ್ಕೃತಿ ಸಂಗವನ್ನು, ಕಳೆದುಕೊಂಡು ಬೀಳಾಗಿದ್ದರು. ನಮ್ಮ ಸಮಾಜ ದಲ್ಲಿ ಕಾರಣಾಂತರಗಳಿಂದ ತಲೆಹಾಕಿದ್ದ ಅತಿಬಾಲ್ಯವಿವಾಹಾದಿ ದೋಷ ಗಳಿಂದಲೂ, ವಿದ್ಯಾಭಾವದಿಂದಲೂ, ಸ್ತ್ರೀಯರ ಸ್ಥಿತಿ ಶೋಚನೀಯವಾಗಿತ್ತು.

ನಮ್ಮ ಜನರ ಆರ್ಥಿಕ ಸ್ಥಿತಿ—ರಾಜಕೀಯ ಚದುರಂಗದ ಕೈಚಳಕ ದಿಂದಾಗಿ—ದಿನ ದಿನಕ್ಕೆ ಹದಗೆಡುತ್ತಿತ್ತು.

ನಮ್ಮ ನಾಡಿನ ಸ್ಥಿತಿ ಹೀಗಿದ್ದಾಗ, ಆನಿ ಬೆಸೆಂಟ್‌ರವರು ಭಾರತೀಯರ ಸರ್ವತೋಮುಖವಾದ ಅಭಿವೃದ್ಧಿಗೆ ಶ್ರಮಿಸಲಾರಂಭಿಸಿದರು. ಅದಕ್ಕಾಗಿ ಅವರು ನಮ್ಮ ರಾಷ್ಟ್ರ ಜೀವನದ ನಾನಾರಂಗಗಳಲ್ಲಿ ಸುಧಾರಣೆಗಳನ್ನು ಸೂಚಿಸಿ ಅವನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸಿದರು. ಈ ಮಹಾಪ್ರಯತ್ನಕ್ಕೆ ಪೀಠಿಕೆಯಾಗಿ ಅವರು ಭಾರತವರ್ಷದಲ್ಲೆಲ್ಲಾ ಸಂಚರಿಸಿ, ತಮ್ಮ ಭಾಷಣಗಳ ಮೂಲಕ, ಸಂಭಾಷಣೆಗಳ ಮೂಲಕ ಭಾರತೀಯರಲ್ಲಿ ಆತ್ಮಗೌರವವನ್ನು ಬೆಳೆಸಿದರು. ಭಾರತೀಯರ ಹಿರಿಮೆ, ಅವರ ದರ್ಶನಶಾಸ್ತ್ರಗಳ ಮೇಲ್ಮೆ, ಅವರ ಇತಿಹಾಸದಲ್ಲಿ ತೋರಿಬರುವ ಮಹತ್ತರ ಅಂಶಗಳು ಮುಂತಾದುವನ್ನು ವಿಸ್ತರಿಸಿ ಹೇಳಿ, ಇಂಗ್ಲಿಷ್ ವಿದ್ಯಾಭ್ಯಾಸ ಪಡೆದು ನೈಚ್ಯಾನು ಸಂಧಾನಕ್ಕೆ ಪಕ್ಕಾಗಿದ್ದ ಭಾರತೀಯರು ತಮ್ಮ ಅವರತ್ವವನ್ನು ಕಳೆದು ದಿಟ್ಟತನದಿಂದ

ಕತ್ತೆತ್ತಿನಿಂತು ಜಗತ್ತನ್ನು ನೋಡುವಂತೆ ಮಾಡಿದರು.

ಈ ಕಾರ್ಯ ಸಾಧನೆಯ ಅಂಗವಾಗಿ ಅವರು ರಾಮಾಯಣ ಭಾರತಗಳ ಕಥೆಯನ್ನು ಇಂಗ್ಲಿಷ್‌ನಲ್ಲಿ ಬರೆದು, ಇಂಗ್ಲಿಷ್ ಓದಿದ್ದ ಭಾರತೀಯರಿಗೆ ತಮ್ಮ ಸಂಸ್ಕೃತಿ ಸಾಹಿತ್ಯಗಳಲ್ಲಿ ಆಸಕ್ತಿಯನ್ನುಂಟು ಮಾಡಿದರು. ಭಗವದ್ಗೀತೆಯನ್ನು ಇಂಗ್ಲಿಷ್‌ಗೆ ಭಾಷಾಂತರ ಮಾಡಿ, ಇಂಗ್ಲಿಷ್ ಓದಿದ್ದ ಭಾರತೀಯರಿಗೆ ತಮ್ಮ ಧರ್ಮದ ಸ್ವರೂಪವೂ ಅದರ ಘನತೆಯೂ ತಿಳಿಯುವಂತೆ ಮಾಡಿದರು.

ಕ್ರೈಸ್ತ ಪಾದ್ರಿಗಳ ಕುತ್ಸಿತ ಟೀಕೆಗಳಿಗೆ ಗುರಿಯಾಗಿ, ನಗೆಪಾಟಲಾಗಿ, ಇಂಗ್ಲಿಷ್ ಓದಿದ ಭಾರತೀಯರನ್ನು ನಂಜಿನ ಅಂಬುಗಳಂತೆ ನೋಯಿಸಿದ್ದ ಹಿಂದೂ ಪದ್ಧತಿಗಳನ್ನು ವಿಮರ್ಶಾತ್ಮಕ ದೃಷ್ಟಿಯಿಂದ ವಿವೇಚಿಸಿ, ಆ ಪದ್ಧತಿಗಳ ಅಂತರಂಗ ಸತ್ವವನ್ನು ಪ್ರಕಟಿಸಿ, ಆ ಆಚರಣೆಗಾಗಿ ಭಾರತೀಯರು ನಾಚಬೇಕಾಗಿಲ್ಲವೆಂದೂ, ಹೆಮ್ಮೆ ಪಟ್ಟರೆ ತಪ್ಪಲ್ಲವೆಂದು ಘೋಷಿಸಿದರು.

ಭಾರತೀಯರ ನಡೆನುಡಿಗಳಲ್ಲಿರುವ ಸರಳತೆ, ಗಾಂಭೀರ್ಯಗಳನ್ನು ವಿವರಿಸಿ ಹೇಳಿ ಅವರು ಉತ್ತಮ ನಾಗರಿಕತೆಯ ಪ್ರತಿನಿಧಿಗಳೆಂದು ಸಾರಿದರು.

ವಿದೇಶೀಯರ ಆಡಳಿತಕ್ಕೊಳಗಾಗಿ ಭಾರತವರ್ಷದ ಸಂಸ್ಕೃತಿ ಮೇಲು ನೋಟಕ್ಕೆ ಕುರೂಪಗೊಂಡಿದೆಯಾದರೂ, ಅದರ ಅಂತರಂಗ ಸತ್ವಪೂರ್ಣ ವಾಗಿದೆಯೆಂದು ದೃಷ್ಟಾಂತಪೂರ್ವಕವಾಗಿ ವಾದಿಸಿದರು.

ಭಾರತವರ್ಷದ ಹಿರಿಮೆಯನ್ನು ವಿವರಿಸುತ್ತಾ :

ಜಗತ್ತಿನ ವಿವಿಧ ಜನಾಂಗ ಸಂದೋಹದಲ್ಲಿ, ಪರಮೇಶ್ವರನು ಈ ಹಿಂದೆ ಭಾರತವರ್ಷಕ್ಕೆ ವಿಧಿಸಿದ ವಿಶಿಷ್ಟ ಕರ್ತವ್ಯವೇನು ?–ಧರ್ಮದ ಮಾತೃವಾಗಿರಬೇಕೆಂಬುದು ; ಮಾತೃಸ್ಥಾನವಾಗಿರಬೇಕೆಂಬುದು; ಆಧ್ಯಾತ್ಮಿಕ ಜೀವನದ ಮಹಾಸತ್ಯವನ್ನು ಜಗತ್ತಿನ ಜನರಿಗೆಲ್ಲಾ ಬೀರ ಬೇಕೆಂಬುದು. ಇದು ಭಾರತವರ್ಷದ ಪ್ರಥಮ ಕರ್ತವ್ಯವಾಗಿತ್ತು. ಈ ಕರ್ತವ್ಯವನ್ನು ನೆರವೇರಿ ಸುತ್ತಿದ್ದಷ್ಟು ಕಾಲ ಭಾರತವರ್ಷವು ಸಕಲ ಸೌಭಾಗ್ಯ ಸಮೃದ್ಧವಾಗಿತ್ತು. ಆದರೆ ಭಾರತವರ್ಷವು ಜಗತ್ತಿನ ಧರ್ಮದ ಮಹಾಸಾಮ್ರಾಟ ಪೀಠದ ಮೇಲಿದ್ದ ತನ್ನ ಸ್ಥಾನದಿಂದ ಕೆಳಗುರುಳಿದಂತೆ, ತನ್ನ ಪೂರ್ವಯಶಸ್ಸಿಗೆ ಕಾರಣವಾಗಿದ್ದ ಪರಿಕರಗಳ

ನ್ನೆಲ್ಲಾ ಕಳೆದುಕೊಂಡಿತು. ಐಶ್ವರ್ಯ ಕುಗ್ಗಿತು; ಸ್ವತಂತ್ರ ಅತಂತ್ರ ವಾಯಿತು. ಅಧಃಪತನವಾಯಿತು. ಕೊನೆಗೆ, ಭಾರತೀಯರಿಗೆ ಜಗತ್ತಿನ ಜನಾಂಗಗಳ ನಡುವೆ ನೆಲೆ ತಪ್ಪಿತೇನೋ ಎನ್ನುವಂಥ ಸ್ಥಿತಿ ಬಂತು. ಈ ಮೊದಲು ಇನ್ನು ಹಲವಾರು ಜನಾಂಗಗಳು ಈ ಅಧಃ ಪತನದ ಹಾದಿಯಲ್ಲಿ ಹಾಯ್ದಿವೆ. ಪ್ರಾಚೀನ ಜಗತ್ತಿನಲ್ಲಿ ಪ್ರಬಲ ಜನಾಂಗಗಳು ಬೆಳೆದು ಬಾಳಿದುವು. ಆದರೆ ಅವುಗಳದಾಗಿ ಇಂದು ಉಳಿದಿರುವುದೇನು ? ಅವು ಆಳಿ ಅಳಿದ ಸ್ಥಳವನ್ನು ಸೂಚಿಸುವ ಅವ ಶೇಷಗಳು ಮಾತ್ರ....ಜನಾಂಗದ ಮೇಲೆ ಜನಾಂಗ ನಿಧನ ಹೊಂದಿತು ; ಸಮಾಧಿಯಾಯಿತು. ಆದರೆ-ಭಾರತವರ್ಷ, ಈ ಅಳಿದ ಜನಾಂಗ ಗಳೆಲ್ಲಕ್ಕಿಂತ ಹಳೆಯದಾದ-ಹಿಂದೂದೇಶ ಅಳಿದಿಲ್ಲ ; ಉಳಿದಿದೆ. ಅದರ ಅವಶೇಷವಿನ್ನೂ ಚಿತೆಯನ್ನೇರಿಲ್ಲ. ಭಾರತವರ್ಷವಿನ್ನೂ ಬದುಕಿದೆ-ಇಳಿಉಸಿರನ್ನೆಳೆದಾಡುತ್ತ. ಭಾರತವರ್ಷ—ಈ ನಮ್ಮ ವೃದ್ಧಮಾತೆ, ಮಿಕ್ಕೆಲ್ಲ ಜನಾಂಗಗಳಿಗಿಂತಲೂ ಹಿರಿಯಳಾದ ಈಕೆ ಇನ್ನೂನಿಂತಿದ್ದಾಳೆ —ದುರ್ಗ ನಿಂತಿರುವಂತೆ. ಈ ದೇವತೆ ಅಗಣಿತ ವರ್ಷಗಳಿಂದ ಬಾಳಿ ದ್ದಾಳೆ. ಆದರೂ ಇಂದಿಗೂ ತರುಣಿಯಾಗಿದ್ದಾಳೆ: ಏಕೆಂದರೆ ಆತ್ಮಕ್ಕೆ ಆಯುರ್ಮಾನವಿಲ್ಲ, ಜನನವಿಲ್ಲ, ಮರಣವಿಲ್ಲ. ಯಾವ ಜನಾಂಗ ಆತ್ಮಶಕ್ತಿಯ ಚಿಹ್ನೆಯಾಗಿ ನಿಲ್ಲುತ್ತದೆಯೋ ಅದು ಎಂದೆಂದಿಗೂ ಬಾಳಲೇಬೇಕು—ಆ ಜನಾಂಗದ ಮಕ್ಕಳೇ ತಮ್ಮ ತಾಯನ್ನು ಹಳಿಯಲಿ, ಚಿಂತೆಯಿಲ್ಲ ; ಅಭಿಮಾನಿಗಳು ಆಸಕ್ತ ಕಳೆದು ಕೊಂಡು ದೂರ ಸರಿಯಲಿ, ಚಿಂತೆಯಿಲ್ಲ. ಭರತಮಾತೆ, ತನ್ನ ಮಕ್ಕಳ ಈ ಅಲಕ್ಷ್ಯವನ್ನು ನೋಡಿ, ತನ್ನ ರಕ್ಷಣೆಯನ್ನು ನೆನೆದು ದೇವತೆಗಳ ಕಡೆಗೆ ಕಣ್ಣು ತಿರುಗಿಸಿ ಈ ರೀತಿ ಹೇಳಿದಳು :

ಎಲೈ ದೇವತೆಗಳಿರಾ ! ನನ್ನ ಮಕ್ಕಳಲ್ಲಿ ಕೆಲವರ ಆತ್ಮವನ್ನು ಬೇರೆ ರಾಷ್ಟ್ರಗಳಿಗೆ ಕಳುಹಿಸುತ್ತೇನೆ. ಅವು ಅಲ್ಲಿ ಬೇರೆ ಬೇರೆ ಜನಾಂಗಗಳಲ್ಲಿ ಜನ್ಮವೆತ್ತಲಿ. ನನ್ನ ಭೂಮಿಯಲ್ಲಿ ಬೆಳೆದ ನನ್ನ ಮಕ್ಕಳೇ ನನ್ನಲ್ಲಿ ನಿರಾಸಕ್ತರಾದಾಗ, ಪರದೇಶಗಳಲ್ಲಿ ಹುಟ್ಟಿದ ನನ್ನ ಈ ಮಕ್ಕಳ ಪ್ರೀತಿ ನನ್ನ ಮೇಲೆ ಅಚಲಿತ

ವಾಗಿರುವುದು. ದೂರ ದೂರದ ಜನಾಂಗಗಳಲ್ಲಿ ಹುಟ್ಟಿ ಬೆಳೆದ ನನ್ನ ಈ ಮಕ್ಕಳನ್ನು ನನ್ನ ಮನೆಗೆ ಕರೆತರುವೆನು. ಅವರನ್ನು ಇಲ್ಲಿ ಸ್ಥಾಪಿಸುವೆನು. ಅವರು ನನ್ನ ಮಕ್ಕಳಿಗೆ ಅವರ ಕರ್ತವ್ಯ ವೇನೆಂಬುದನ್ನು ತಿಳಿಸಿ ಹೇಳಲಿ. ಅವರ ಧರ್ಮವನ್ನವರ ನೆನಪಿಗೆ ತಂದು ಕೊಡಲಿ. ಆತ್ಮಶಕ್ತಿಯಲ್ಲಿ ಅಡಗಿರುವ ಪುನರುಜ್ಜೀವನ ಸಾಮರ್ಥ್ಯವನ್ನು ಅವರು, ನನ್ನವರಿಗೆ ಮನ ಮುಟ್ಟುವಂತೆ ಹೇಳಲಿ.

ಅವರು ತಾಯಿಯ ಕರೆಕೇಳಿ, ಅವಳ ಆಜ್ಞೆಯನ್ನು ಶಿರಸಾವಹಿಸಿ, ಸಪ್ತ ಸಮುದ್ರಗಳನ್ನು ದಾಟಿ ಇಲ್ಲಿಗೆ ಬಂದಿದ್ದಾರೆ. 'ತಾಯಿಯ ಆಜ್ಞೆ ಯಂತೆ ನಡೆದುಕೊಳ್ಳಿ. ಇಲ್ಲದಿದ್ದರೆ, ಭರತಮಾತೆಯ ಮಕ್ಕಳಿಗಿಂತ ಪರಕೀಯರೇ ಆಕೆಯ ಸೇವೆ ಚೆನ್ನಾಗಿ ಮಾಡಿದರೆಂಬ ಅಪಖ್ಯಾತಿ ಬಂದೀತು' ಎಂದು ಭಾರತೀಯರಿಗೆ ಹೇಳುತ್ತಿದ್ದಾರೆ—ವಿದೇಶೀಯರ ರೂಪಿನಲ್ಲಿ ಭಾರತಕ್ಕೆ ಹಿಂದಿರುಗಿರುವ ಭಾರತಮಾತೆಯ ಮಕ್ಕಳು.. .. ನನ್ನ ಮಾತನ್ನು ಕೇಳಿ ; ನಿಮ್ಮ ಭವಿಷ್ಯ, ನಿಮ್ಮ ಪ್ರಾಚೀನ ಸಾಧನೆ ಗಿಂತ ಹಿರಿದಾಗಿರುತ್ತದೆ—ಆತ್ಮಜ್ಞಾನದಲ್ಲಿ, ಆಧ್ಯಾತ್ಮಕ ಸಾಧನೆ ಯಲ್ಲಿ, ಆಧ್ಯಾತ್ಮಿಕ ಜೀವನದಲ್ಲಿ ಎಲ್ಲದರಲ್ಲಿಯೂ ಹಿರಿದಾಗಿರುತ್ತದೆ. ಭೂಲೋಕದಲ್ಲಿ ಅವತರಿಸಲು ಸಿದ್ಧರಾಗಿರುವ ಭುವರ್ಲೋಕ ವಾಸಿ ಗಳಾದ ಋಷಿಗಳು ಮತ್ತೆ ಭಾರತವರ್ಷದಲ್ಲಿ ಜನ್ಮವೆತ್ತುವರು........ ಜನಾಂಗದ ನಾಯಕ ಮಣಿಗಳು, ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಸರಳ, ಸಂಯಮಯುತ, ಪರಿಶುದ್ಧ ಜೀವನವನ್ನು ನಡೆಸಿದಾಗ, ಅವರು ಅಧ್ಯಾತ್ಮಶಕ್ತಿ ಸಂಪನ್ನರಾದಾಗ, ಆಗ, ಆಗ ಮಿಕ್ಕೆಲ್ಲ ಸೌಭಾಗ್ಯ ಗಳೂ ಸಿದ್ಧಿಸುತ್ತವೆ."

ಆನಿ ಬೆಸೆಂಟ್‌ರವರು ಇಂಥ ಉದ್ಬೋಧಕ ಭಾಷಣಗಳಿಂದ, ತಮ್ಮ ವೀರವಾಣಿಯಿಂದ ಭಾರತೀಯರಲ್ಲಿ ಆತ್ಮಗೌರವವನ್ನು ಪ್ರಚೋದಿಸಿದರು. ತಮ್ಮ ಜನಾಂಗದ ಪ್ರಾಚೀನ ಸಾಧನೆಗಳ ಬಗ್ಗೆ ಅವರು ಹೆಮ್ಮೆಗೊಳ್ಳುವಂತೆ ಮಾಡಿದರು ; ತಮ್ಮ ಭವಿಷ್ಯದ ಹಿರಿಮೆಯಲ್ಲಿ ನಂಬುಗೆಗೊಳ್ಳುವಂತೆ ಮಾಡಿದರು. ಭಾರತೀಯತ್ವ ಮುದುಡಿಕೊಂಡಿದ್ದ ಭಾರತೀಯರಲ್ಲಿ, ಅದು

ವಿಕಸನ ಹೊಂದುವಂತೆ ಮಾಡಿದರು. ಇಂಗ್ಲಿಷ್ ವಿದ್ಯಾಭ್ಯಾಸವೂ, ಕ್ರೈಸ್ತ ಪಾದ್ರಿಗಳ ಪ್ರಚಾರವೂ ಭಾರತೀಯರ ಆತ್ಮದ ಮೇಲೆ ಅವರ ಸಂಸ್ಕೃತಿಯ ಮೇಲೆ, ನಡೆಸಿದ್ದ ದಾಳಿಯಿಂದ ಭಾರತೀಯರ ಹೃದಯ ಮನಸ್ಸುಗಳ ಮೇಲುಂಟಾಗಿದ್ದ ದುಷ್ಟ ಪರಿಣಾಮವನ್ನು, ನೋವು ನಷ್ಟಗಳನ್ನು ತಮ್ಮ ಅಮೃತವಾಣಿಯಿಂದ ತಮ್ಮ ನಂಬುಗೆಯ ಸಂಜೀವನ ಸೇಚನದಿಂದ ಸರಿಪಡಿಸಿದರು.

ತಮ್ಮ ಭಾಷಣಲೇಖನಾದಿಗಳ ಮೂಲಕ ಭಾರತೀಯರಿಗೆ ಅವರ ಧರ್ಮ, ಸಂಸ್ಕೃತಿ, ಸದಾಚಾರ ಪದ್ಧತಿಗಳ ಹಿರಿಮೆ, ಮಹತ್ವಗಳನ್ನು ತೋರಿಸಿಕೊಟ್ಟು ಅವರಲ್ಲಿ ಆತ್ಮ ಗೌರವವನ್ನು ಬೆಳೆಸಿದ್ದಷ್ಟರಿಂದಲೇ ಆನಿ ಬೆಸೆಂಟ್‌ರವರು, ತೃಪ್ತರಾಗಲಿಲ್ಲ. ಅವರ ಈ ಕಾರ್ಯಕ್ರಮದ ಪ್ರಧಾನ ಉದ್ದೇಶ ವಿದೇಶೀಯರ ವಿದ್ಯಾಭ್ಯಾಸ, ಪ್ರಚಾರತಂತ್ರಗಳಿಗೆ ಮಾರುಹೋಗಿದ್ದ ವಿದ್ಯಾವಂತ ಭಾರತೀಯರಿಗೆ ಅವರ ಪೂರ್ವಸಂಸ್ಕೃತಿಯ ಹೆಚ್ಚಳವನ್ನು ತೋರಿಸುವುದೇ ಆಗಿತ್ತು. ಇದಿಷ್ಟರಿಂದಲೇ ಭಾರತೀಯ ಪುನರುಜ್ಜೀವನವಾಗುವುದಿಲ್ಲವೆಂದೂ ಅವರು ತಿಳಿದಿದ್ದರು. ಆ ಪುನರುಜ್ಜೀವನ ಕಾರ್ಯದ ಅಂಗವಾಗಿ, ಆ ಕಾರ್ಯಕ್ರಮವನ್ನು ಇನ್ನೂ ವಿಸ್ತರಿಸುವುದು ಅವಶ್ಯಕವಾಗಿತ್ತು. ಅಂದರೆ, ಭಾರತೀಯರಲ್ಲಿ ಆತ್ಮ ಗೌರವವನ್ನು ಬೆಳೆಸುವಂಥ ವಿದ್ಯಾಭ್ಯಾಸವನ್ನು ಆಚರಣೆಗೆ ತರಬೇಕಾಗಿತ್ತು.

ವಿದ್ಯಾಭ್ಯಾಸ ವ್ಯವಸ್ಥೆ ಇಂದಿನಂತೆ ಅಂದೂ ಸರ್ಕಾರದ ಕಯ್ಯಲ್ಲಿಯೇ ಇತ್ತು. ಆದರೆ ಅಂದಿನ ಸರ್ಕಾರ ಜವಾಬ್ದಾರಿ ಸರ್ಕಾರವಾಗಿರಲಿಲ್ಲವಾದುದರಿಂದಲೂ, ಭಾರತೀಯರಲ್ಲಿ ಆತ್ಮ ಗೌರವವನ್ನು ಬೆಳೆಸುವುದು ಆ ಸರ್ಕಾರದ ಅಪೇಕ್ಷೆಯಾಗಿರಲಿಲ್ಲವಾದುದರಿಂದಲೂ, ವಿದ್ಯಾಭ್ಯಾಸದ ಪುನರ್‌ವ್ಯವಸ್ಥೆಯಲ್ಲಿ ಸರ್ಕಾರದಿಂದ ಹೆಚ್ಚಿನ ಸಹಾಯವನ್ನು ನಿರೀಕ್ಷಿಸುವಲ್ಲಿ ಪ್ರಯೋಜನವಿಲ್ಲವೆಂದೂ ಆನಿ ಬೆಸೆಂಟ್‌ರವರಿಗೆ ಗೊತ್ತಿತ್ತು.

ಈ ಅಂಶಗಳನ್ನೆಲ್ಲಾ ಗಮನಿಸಿ ಆನಿ ಬೆಸೆಂಟ್‌ರವರು ರಾಷ್ಟ್ರೀಯತೆಯನ್ನು ತಳಹದಿಯಾಗಿ ಉಳ್ಳ ವಿದ್ಯಾಭ್ಯಾಸ ವಿಧಾನವನ್ನು ಆಚರಣೆಗೆ ತರಬೇಕೆಂದು ನಿರ್ಧರಿಸಿದರು. ಇವರ ಈ ನಿರ್ಧಾರವನ್ನು ಅನೇಕ ಮಂದಿ ಭಾರತೀಯರು ಅನುಮೋದಿಸಿದರು. ಇಂಥ ಬೆಂಬಲ ದೊರೆತೊಡನೆಯೇ ಆನಿ ಬೆಸೆಂಟರು, ತಾವು ಲಂಡನ್ನಿನ ಸ್ಕೂಲ್ ಬೋರ್ಡಿನ ಸದಸ್ಯರಾಗಿ ಪಡೆದಿದ್ದ ಅನುಭವವನ್ನು ಸದುಪಯೋಗಮಾಡಿಕೊಂಡು, ಈ ಮೊದಲೇ ಹೇಳಿರುವಂತೆ ೧೮೯೮ರಲ್ಲಿ ಕಾಶಿಯಲ್ಲಿ ಸೆಂಟ್ರಲ್ ಹಿಂದೂ ಕಾಲೇಜನ್ನು ಸ್ಥಾಪಿಸಿದರು. ಭಾರತವರ್ಷದಲ್ಲಿ ನೂತನ ರಾಷ್ಟ್ರೀಯ ವಿದ್ಯಾಭ್ಯಾಸ

ಪದ್ಧತಿಯನ್ನು ರೂಪಿಸುವ ಬಗೆಗೆ ಈ ಪ್ರೌಢ ವಿದ್ಯಾಲಯುವನ್ನು ತಮ್ಮ ಪ್ರಧಾನ ಪ್ರಯೋಗಶಾಲೆಯನ್ನಾಗಿ ಮಾಡಿಕೊಂಡರು. ಆದ್ದರಿಂದ ಈ ಹೊಸ ವಿದ್ಯಾಭ್ಯಾಸ ಪದ್ಧತಿಯ 'ದೃಷ್ಟಿ' ಏನಾಗಿತ್ತೆಂಬುದನ್ನು ಕೆಲವು ಮಾತುಗಳಲ್ಲಿ ಹೇಳುವುದು ಅವಶ್ಯಕ.

ಮೊದಲನೆಯದಾಗಿ: ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸದ ಸೌಲಭ್ಯಗಳನ್ನು ಕಲ್ಪಿಸುವುದು ಭಾರತೀಯರ ಕರ್ತವ್ಯ. ಆದ್ದರಿಂದ ಅವರು ಬೇರೆಯವರ ಕೈ ಕಾಯದೆ, ಸ್ವತಂತ್ರವಾಗಿ, ಈ ಸೌಲಭ್ಯವನ್ನು ಕಲ್ಪಿಸಿಕೊಳ್ಳಲು ಸಮರ್ಥರಾಗಬೇಕು. ಅದರ ನಿರ್ದೇಶನ ಪೂರ್ಣವಾಗಿ ಭಾರತೀಯರ ಕಯ್ಯಲ್ಲಿಯೇ ಇರಬೇಕು.

ಎರಡನೆಯದಾಗಿ : ಇಂಡಿಯಾ ದೇಶವು ಸ್ವತಂತ್ರವಾಗಬೇಕಾದುದು ಅವಶ್ಯಕವಾಗಿ ಅದಕ್ಕೆ ಪೀಠಿಕೆಯಾಗಿ ಈ ವಿದ್ಯಾಭ್ಯಾಸ ಪದ್ಧತಿಯು ಭಾರತೀಯ ವಿದ್ಯಾರ್ಥಿಗಳಲ್ಲಿ ಅಪ್ರತಿಮ ದೇಶ ಪ್ರೇಮವನ್ನು ಪ್ರಚೋದಿಸುವಂಥದಾಗಿರಬೇಕು.

ಮೂರನೆಯದಾಗಿ : ಈ ಪದ್ಧತಿ ಪೂರ್ಣವಾಗಿ 'ಸ್ವದೇಶಿ' ಆಗಬೇಕು. ಎಂದರೆ, ಭಾರತೀಯರ ಜೀವನ ಧ್ಯೇಯಾದಿಗಳಿಗೆ ಪೂರ್ಣವಾಗಿ ಹೊಂದಿಕೊಂಡಿರಬೇಕು.

ನಾಲ್ಕನೆಯದಾಗಿ : ಈ ವಿದ್ಯಾಭ್ಯಾಸ ಪದ್ಧತಿಯಲ್ಲಿ ಧರ್ಮಬೋಧೆಗೆ ಸ್ಥಾನವಿರಬೇಕು.

ಐದನೆಯದಾಗಿ : ಈ ಪದ್ಧತಿಯಲ್ಲಿ ಪಾಶ್ಚಾತ್ಯ ವಿಜ್ಞಾನಗಳಿಗೂ ಪ್ರಾಧಾನ್ಯತೆಯಿರಬೇಕು.

ಪುಷ್ಟವಾದ ಶರೀರದಲ್ಲಿ ದೃಢವಾದ ಬುದ್ಧಿಯನ್ನುಳ್ಳ ಸುಸಂಸ್ಕೃತನಾದ ಪೂರ್ಣವಿಕಸಿತನಾದ ಭಾರತೀಯನ ನಿರ್ಮಾಣವೇ ಈ ವಿದ್ಯಾಭ್ಯಾಸ ಪದ್ಧತಿಯ ಧ್ಯೇಯವಾಗಿರಬೇಕು ಎಂಬುದು ಅವರ ಆಶೆಯಾಗಿತ್ತು.

ಇಂಥ ವ್ಯವಸ್ಥೆಯ ರಚನೆಯಲ್ಲಿ ಅವರು ಪ್ರಾಚೀನ ವಿದ್ಯಾಭ್ಯಾಸ ಪದ್ಧತಿಗಳ ಉತ್ತಮಾಂಶಗಳೆಲ್ಲವನ್ನೂ ಗಣನೆಗೆ ತಂದುಕೊಂಡಿದ್ದರು. ಪಾಠ ಹೇಳುವುದಕ್ಕೆ ಶುಲ್ಕವನ್ನು (ಫೀ) ವಸೂಲು ಮಾಡದಿರುವುದೇ ಉತ್ತಮ

ವೆಂದೂ, ಆದರೆ ಅದು ಸಾಧ್ಯವಿಲ್ಲದೆ ಶುಲ್ಕವನ್ನು ವಿಧಿಸುವಾಗ, ಅದು ಆದಷ್ಟು ಕಡಿಮೆಯಾಗಿರಬೇಕೆಂಬುದು ಆನಿ ಬೆಸೆಂಟ್‌ರ ಅಭಿಪ್ರಾಯವಾಗಿತ್ತು.

ವ್ಯಕ್ತಿಯ ಬುದ್ಧಿಶಕ್ತಿ, ಭಾವನಾಶಕ್ತಿ, ದೇಹಶಕ್ತಿಗಳ ಬೆಳವಣಿಗೆಗೆ ಬ್ರಹ್ಮಚರ್ಯವು ಅತ್ಯಾವಶ್ಯಕವೆಂದು ಮನಗಂಡಿದ್ದ ಆನಿ ಬೆಸೆಂಟರು, ಸೆಂಟ್ರಲ್ ಹಿಂದೂ ಕಾಲೇಜನ್ನು ಸ್ಥಾಪಿಸಿದಾಗ, ವಿವಾಹಿತ ವಿದ್ಯಾರ್ಥಿಗಳನ್ನು ಆ ವಿದ್ಯಾಸಂಸ್ಥೆಗೆ ಸೇರಿಸಲು ನಿರಾಕರಿಸಿದರು. ಸಂಸ್ಥೆಯ ವಿದ್ಯಾರ್ಥಿಗಳೆಲ್ಲರೂ ಬ್ರಹ್ಮಚರ್ಯ ನಿಯಮದ ಕಟ್ಟುಗೊಳಪಟ್ಟು ಜೀವಿಸುವಂತೆ ವ್ಯವಸ್ಥೆ ಮಾಡಿದರು. ಹಿಂದೂಧರ್ಮದ ವಿಚಾರವಾಗಿ ವಿದ್ಯಾರ್ಥಿಗಳಿಗೆ ಕ್ರಮವಾದ ಪಾಠವನ್ನು ಏರ್ಪಡಿಸಿದ್ದಲ್ಲದೆ, ವಿದ್ಯಾರ್ಥಿಗಳ ಉಪಯೋಗಕ್ಕಾಗಿ, ಹಿಂದೂಧರ್ಮವನ್ನು ಕುರಿತು ತಾವೇ ಎರಡು ಪುಸ್ತಕಗಳನ್ನು ಬರೆದರು. ಈ ಸಂಸ್ಥೆಗೆ ಅವರು ಆರಿಸಿದ ಅಧ್ಯಾಪಕರು, ಸೇವಾಬುದ್ಧಿಯಿಂದ ಕೆಲಸಮಾಡಲು ಬಂದವರಾಗಿದ್ದರೇ ಹೊರತು, ಸಂಬಳದ ಆಸೆಗಾಗಿ ಬಂದಿರಲಿಲ್ಲ.

ಕಾಶಿಯಲ್ಲಿ ಸೆಂಟ್ರಲ್ ಹಿಂದೂ ಕಾಲೇಜು ಸ್ಥಾಪಿತವಾದಮೇಲೆ, ಆ ಸಂಸ್ಥೆಯ ಸಾಧನೆಗಳನ್ನು ಕಂಡ ಅನೇಕರು, ರಾಷ್ಟ್ರದ ಬೇರೆಬೇರೆ ಯೆಡೆಗಳಲ್ಲಿ ರಾಷ್ಟ್ರೀಯ ವಿದ್ಯಾಶಾಲೆಗಳನ್ನು ಸ್ಥಾಪಿಸಲು ಪ್ರಯತ್ನ ನಡೆಸಿದರು. ಹಲವೆಡೆಗಳಲ್ಲಿ ಇಂಥ ಪ್ರಯತ್ನಗಳು ಯಶಸ್ವಿಯಾದುವು.

ಆನಿ ಬೆಸೆಂಟ್‌ರವರೇ ಕಾಶಿಯಲ್ಲಿ ಒಂದು ಹೆಣ್ಣುಮಕ್ಕಳ ಶಾಲೆಯನ್ನು ಆರಂಭಿಸಿದರು. ಕಾಲಕ್ರಮದಲ್ಲಿ ಅದನ್ನು ಒಂದು ಕಾಲೇಜನ್ನಾಗಿ ಮಾಡಿದರು.

ಅದೇ ರೀತಿ ಅವರು ಸ್ಥಾಪಿಸಿದ ಸೆಂಟ್ರಲ್ ಹಿಂದೂ ಕಾಲೇಜೇ ಬುನಾದಿಯಾಗಿ ಕೆಲವು ವರ್ಷಗಳ ಅನಂತರ ಬನಾರಿಸ್ ಹಿಂದೂ ವಿಶ್ವವಿದ್ಯಾಲಯವು ರೂಪುಗೊಂಡಿತು. ಪಂಡಿತ ಮದನ ಮೋಹನ ಮಾಳವೀಯರು ಈ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಅದರ ನಿರ್ವಹಣೆಯ ಹೊಣೆಹೊತ್ತರು. ಆನಿ ಬೆಸೆಂಟರು ಆರಂಭಿಸಿದ ಕಾರ್ಯವನ್ನು ಅವರು ಮುಂದುವರೆಸಿದರು.

ಇಂಡಿಯಾದೇಶದಲ್ಲಿ ವಿದ್ಯಾಭಿವೃದ್ಧಿಗಾಗಿ ಆನಿ ಬೆಸೆಂಟರು ಸಲ್ಲಿಸಿದ ಅಮೌಲ್ಯ ಸೇವೆಯನ್ನು ಗಮನಿಸಿ, ಹಿಂದೂ ವಿಶ್ವವಿದ್ಯಾಲಯವು

೧೯೨೧ರಲ್ಲಿ ಅವರಿಗೆ "ಡಾಕ್ಟರ್ ಆಫ್ ಲಿಟರ್ಸ್" ಎಂದು ಗೌರವ ಪ್ರಶಸ್ತಿಯನ್ನು ಕೊಟ್ಟು ಮನ್ನಿಸಿತು.

ಆನಿ ಬೆಸೆಂಟ್‌ರ ವ್ಯಕ್ತ ಮತ್ತು ಅವ್ಯಕ್ತ ಪ್ರೇರಣೆಯಿಂದ ಸ್ಥಾಪಿತವಾಗಿರುವ ಹಲವಾರು ಉತ್ತಮ ವಿದ್ಯಾಸಂಸ್ಥೆಗಳು ಇಂದಿಗೂ ಅನೇಕೆಡೆಗಳಲ್ಲಿ ಸೇವೆಸಲ್ಲಿಸುತ್ತಿವೆ.

ಇದೆಲ್ಲಾ, ಕಾರ್ಯರೂಪಕ್ಕೆ ಬಂದ ಅವರ ವಿದ್ಯಾಕಾರ್ಯಕ್ರಮಗಳ ಮಾತಾಯಿತು. ಇದಕ್ಕಿಂತ ತುಂಬಾ ಹೆಚ್ಚಿನ ಸಾಧನೆಯನ್ನು ಆನಿ ಬೆಸೆಂಟ್‌ರು ಮನಸ್ಸಿನಲ್ಲಿಟ್ಟುಕೊಂಡಿದ್ದರು. ಅವುಗಳ ಸಾಧನೆಗಾಗಿ ಪ್ರಯತ್ನಗಳನ್ನು ಮಾಡಿದರು. ಆದರೆ, ವಿವಿಧ ಪರಿಸ್ಥಿತಿಗಳ ಫಲವಾಗಿ ಅವು ಕಾರ್ಯರೂಪಕ್ಕೆ ಬರಲಿಲ್ಲ. ಬಂದಿದ್ದರೆ ಅವು ಇಂಡಿಯಾದ ಇತಿಹಾಸದ ಮೇಲೆ ತಮ್ಮ ಪ್ರಚಂಡ ಪರಿಣಾಮವನ್ನು ಬೀರುತ್ತಿದ್ದುವೇನೋ ? ಆದ್ದರಿಂದ ಅವುಗಳಲ್ಲಿ ಎರಡನ್ನು ಕುರಿತು ಕೆಲವು ಮಾತುಗಳನ್ನು ಹೇಳುವುದು ಅವಶ್ಯಕ:

ವಿಶಾಲವಾದ ಹಿಂದೂ ಸಂಸ್ಕೃತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಆನಿ ಬೆಸೆಂಟ್‌ರು ರೂಪಿಸಿದ ನವ ವಿದ್ಯಾಪದ್ಧತಿ ಇಂಡಿಯಾದ ಸ್ಥಿತಿಗತಿಗಳಿಗೆ ಚೆನ್ನಾಗಿ ಹೊಂದಿಕೊಂಡಿತ್ತಾದರೂ, ಆ ಪದ್ಧತಿ ಅನುಕರಣೀಯವಾಗಿತ್ತಾದರೂ, ಕಾಶಿಯಲ್ಲಿ ಸೆಂಟ್ರಲ್ ಹಿಂದೂ ಕಾಲೇಜ್ ಸ್ಥಾಪನೆಯಾದಮೇಲೆ ಅಲಿಘರ್‌ನಲ್ಲಿ ಮುಸ್ಲಿಂ ಕಾಲೇಜ್ ಆರಂಭವಾದುದು ಅವರ ಮನಸ್ಸಿನಲ್ಲಿ ಕಳವಳವನ್ನುಂಟುಮಾಡಿತು. ಇದರಿಂದಾಗಿ ಭಾರತದ ವಿದ್ಯಾಭ್ಯಾಸ ಪದ್ಧತಿಯೇ ಇಬ್ಭಾಗವಾಗಬಹುದೆಂದೂ ತತ್ಪರಿಣಾಮವಾಗಿ ಇಡೀ ರಾಷ್ಟ್ರ ಹಿತಕ್ಕೇ ಹಾನಿಯಾಗಬಹುದೆಂದೂ ಆನಿ ಬೆಸೆಂಟರು ಭಾವಿಸಿದರು. ಈ ದುಷ್ಪರಿಣಾಮವನ್ನು ತಪ್ಪಿಸುವ ಬಗೆಯನ್ನು ಕುರಿತು ತೀವ್ರವಾಗಿ ಆಲೋಚಿಸಿ, ಇಡೀ ಇಂಡಿಯಾದೇಶಕ್ಕೆ ಅನ್ವಯಿಸುವಂತೆ, "ಯೂನಿವರ್ಸಿಟಿ ಆಫ್ ಇಂಡಿಯಾ" ಎಂಬ ವಿಶ್ವವಿದ್ಯಾಲಯವನ್ನು ಸ್ಥಾಪಿಸಬೇಕೆಂದೂ, ಅದರ ಸ್ಥಾಪನೆಗೆ ಬ್ರಿಟಿಷ್ ಸಾಮ್ರಾಟರ ಅನುಜ್ಞಾಪತ್ರವನ್ನು ಪಡೆಯಬೇಕೆಂದು ನಿರ್ಧರಿಸಿದರು. ತಮ್ಮ ಈ ನಿರ್ಧಾರವನ್ನು ಭಾರತದ ವಿದ್ಯಾಭಿವೃದ್ಧಿಯಲ್ಲಿ ಆಸಕ್ತರಾಗಿದ್ದ ಹಲವಾರುಮಂದಿ ಹಿಂದೂ ಮುಸ್ಲಿಂ ಮುಖಂಡರಿಗೆ ತೋರಿಸಿ, ತಮ್ಮ ಸೂಚನೆಗೆ ಅವರ ಬೆಂಬಲವನ್ನು ಪಡೆದರು. ಅಂದಿನ ವೈಸ್ರಾಯರು

ಆನಿ ಬೆಸೆಂಟರ ಈ ಸೂಚನೆಗೆ ಬೆಂಬಲ ಕೊಟ್ಟಿದ್ದಲ್ಲದೆ, ಅವರು ಕೊಟ್ಟ ಅನುಜ್ಞಾಪತ್ರದ ಬೇಡಿಕೆಯನ್ನು ಸಾಮ್ರಾಟರ ಪರಿಶೀಲನೆ ಒಪ್ಪಿಸಲು ವ್ಯವಸ್ಥೆ ಮಾಡಿದರು. ಆದರೆ ನಾನಾಕಾರಣಗಳಿಂದಾಗಿ "ಯೂನಿವರ್ಸಿಟಿ ಆಫ್ ಇಂಡಿಯಾ"ವನ್ನು ಸ್ಥಾಪಿಸುವ ಪ್ರಯತ್ನ ಫಲಕಾರಿಯಾಗಲಿಲ್ಲ. ಆನಿ ಬೆಸೆಂಟರು ಇದರಿಂದ ಧೈರ್ಯಗುಂದದೆ, ತಾವು ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ಮತ್ತೆ ಈ ಪ್ರಯತ್ನವನ್ನು ಕೈಗೊಂಡು ಅಡ್ಯಾರ್‌ನಲ್ಲಿ "ನ್ಯಾಷನಲ್ ಯೂನಿವರ್ಸಿಟಿ" ಯನ್ನು ಸ್ಥಾಪಿಸಿ ಅದನ್ನು ಕೆಲಕಾಲ ನಡೆಸಿದರು. ಧನಾಭಾವವೇ ಮುಂತಾದ ಕಾರಣಗಳಿಂದ ಆ ಪ್ರಯತ್ನವನ್ನೂ ಕೈಬಿಡಬೇಕಾಯಿತು.

ಆದರೆ ಅವರ ಈ ಪ್ರಯತ್ನಗಳು ಫಲಕಾರಿಯಾಗಿದ್ದು, ಹಿಂದೂ ಮತ್ತು ಮುಸ್ಲಿಂ ವಿದ್ಯಾಸಂಸ್ಥೆಗಳನ್ನು ಒಂದೇ ಧ್ಯೇಯದ, ಆಡಳಿತದ, ನಿರ್ದೇಶನದ ಪರಿಮಿತಿಯೊಳಕ್ಕೆ ತರುವುದು ಸಾಧ್ಯವಾಗಿದ್ದಲ್ಲಿ, ಹಿಂದೂ ಮುಸ್ಲಿಂ ಸಖ್ಯ ಏರ್ಪಡಲು ಒಂದು ಸದವಕಾಶವುಂಟಾಗುತ್ತಿತ್ತೇನೋ? ನಮ್ಮ ರಾಷ್ಟ್ರ ಇಬ್ಭಾಗವಾಗುವ ಪ್ರಸಂಗ ಬರುತ್ತಿರಲಿಲ್ಲವೇನೋ ?

ಆನಿಬೆಸೆಂಟರು "ನ್ಯಾಷನಲ್ ಯೂನಿವರ್ಸಿಟಿ" ಯನ್ನು ಸ್ಥಾಪಿಸಿದಾಗ ಅದು ಇಂಡಿಯಾದೇಶದ ವಿದ್ಯಾಭ್ಯಾಸ ವ್ಯವಸ್ಥೆಯ ಶಿಖರವಾಗಬೇಕೆಂದು ಭಾವಿಸಿಕೊಂಡು, ಆ ಶಿಖರವನ್ನು ಹೊತ್ತು ನಿಲ್ಲಲು ಸಮರ್ಥವಾಗುವಂಥ ಒಂದು ರಾಷ್ಟ್ರೀಯ ವಿದ್ಯಾಭ್ಯಾಸ ಕ್ರಮವನ್ನೂ ಯೋಚಿಸಿದ್ದರು. ಹಂತ ಹಂತವಾಗಿ ಏರುವಂತೆ ವ್ಯವಸ್ಥಿತವಾಗಿದ್ದ ಈ ವಿದ್ಯಾಭ್ಯಾಸ ಪದ್ಧತಿ ಹಳ್ಳಿಯ ಮಟ್ಟದಿಂದ ಆರಂಭವಾಗುತ್ತಿತ್ತು. ಹಳ್ಳಿಗಳ ವಿದ್ಯಾವಶ್ಯಕತೆಗಳನ್ನು ಹಳ್ಳಿಯ ಶಾಲೆಗಳು ಪೂರಯಿಸುತ್ತಿದ್ದವು. ಅದಕ್ಕಿಂತ ಮೇಲ್ಪಟ್ಟದ ವಿದ್ಯಾಭ್ಯಾಸ ದೊಡ್ಡ ಊರುಗಳಲ್ಲಿ, ಆ ಮೇಲೆ ಅತ್ಯಂತ ಪ್ರೌಢ ವಿದ್ಯಾಭ್ಯಾಸ ರಾಜಧಾನಿ ನಗರಗಳ ಕಲಾಶಾಲೆಗಳಲ್ಲಿ ಈ ವ್ಯವಸ್ಥೆಯ ಆಡಳಿತದ ಹೊಣೆಗಾರಿಕೆ ನ್ಯಾಷನಲ್ ಯೂನಿವರ್ಸಿಟಿಯದು. ಇದಕ್ಕೆ ಅಧೀನವಾಗಿ ಪ್ರಾಂತಿಕ ಸಂಸ್ಥೆಗಳು, ತಮ್ಮ ತಮ್ಮ ಪ್ರಾಂತ್ಯದ ಭಾಷೆಯಲ್ಲಿ ಪಾಠ ಪ್ರವಚನಗಳನ್ನು ನಡೆಸುವುದಲ್ಲದೆ, ಆಯಾ ಪ್ರಾದೇಶಿಕ ಭಾಷೆ, ಸಂಸ್ಕೃತಿ, ಕಲೆಗಳನ್ನು ಪುನರುಜ್ಜೀವನಗೊಳಿಸುವ ಮತ್ತು ಅವುಗಳ ಬಗ್ಗೆ ಸಂಶೋಧನೆನಡೆಸುವಹೊಣೆಗಾರಿಕೆಯನ್ನುವಹಿಸಬೇಕಾಗಿತ್ತು. ಸಾಧ್ಯವಾದಮಟ್ಟಿಗೆ ಶುಲ್ಕವಿಲ್ಲದೆ ಶಿಕ್ಷಣವನ್ನೊದಗಿಸಬೇಕಾಗಿತ್ತು. ಹಳ್ಳಿಗಳ

ಮಟ್ಟದ ವಿದ್ಯಾಭ್ಯಾಸವನ್ನು ರಾಷ್ಟ್ರದ ಎಲ್ಲ ಹಳ್ಳಿಗಳಲ್ಲೂ ವ್ಯವಸ್ಥೆಮಾಡಬೇಕೆಂಬುದು ಈ ಕಾರ್ಯಕ್ರಮದ ಪ್ರಥಮ ಅಂಗವಾಗಿತ್ತು. ಆ ತಳಹದಿಯ ಮೇಲೆ ಮೇಲ್ಮಟ್ಟದ ವಿದ್ಯಾಭ್ಯಾಸ ಬೆಳೆಯಬೇಕಾಗಿತ್ತು. ಬಾಲಕ ಬಾಲಕಿಯರು ಹದಿನಾಲ್ಕುವರ್ಷಗಳ ವರೆಗೆ ಪ್ರಾಥಮಿಕ ವಿದ್ಯಾಭ್ಯಾಸಮಾಡಿದಮೇಲೆ ಹೈಸ್ಕೂಲ್ ಮಟ್ಟದಲ್ಲಿ ಕಲೆ, ವಿಜ್ಞಾನ, ವಾಣಿಜ್ಯ, ಶಿಕ್ಷಣ, ಇತ್ಯಾದಿ ವಿಚಾರಗಳಲ್ಲಿ ಹೆಚ್ಚಿನ ಪರಿಶ್ರಮ ಪಡೆದು ಆ ವಿಚಾರಗಳ ಅಭ್ಯಾಸವನ್ನು ಪ್ರೌಢಕಲಾಶಾಲೆಗಳಲ್ಲಿ ಕೂಡ ಮುಂದುವರಿಸಬಹುದಾಗಿತ್ತು.

ಸ್ವತಂತ್ರ ಭಾರತದ ತರುಣ ತರುಣಿಯರಿಗಾಗಿ ಆನಿ ಬೆಸೆಂಟ್‌ರವರು ಸುಮಾರು ನಲವತ್ತು ವರ್ಷಗಳ ಹಿಂದೆ ರೂಪಿಸಿದ ಯೋಜನೆ ಇದು. ಕವಿವರ್ಯ ರವೀಂದ್ರನಾಥ ಠಾಕೂರರು ಈ ಯೋಜನೆಯನ್ನು ಒಪ್ಪಿ ಈ ಯೋಜನೆಯ ಅಂಗವಾಗಿ ಸ್ಥಾಪಿತವಾದ “ನ್ಯಾಷನಲ್ ಯೂನಿವರ್ಸಿಟಿ”ಯ ಮಹಾಕುಲಪತಿ (ಛಾನ್ಸಿಲರ್)ಗಳಾಗಿರಲು ಒಪ್ಪಿದರೆಂಬುದು ಗಣನೀಯವಾದ ಅಂಶ. ಆದರೆ ೧೯೧೭–೧೮ ಅನಂತರ ನಮ್ಮ ರಾಜಕೀಯ ರಂಗದಲ್ಲಿ ಸಂಭವಿಸಿದ ವಿವಿಧ ಘಟನೆಗಳ ಪರಿಣಾಮವಾಗಿ ಆನಿ ಬೆಸೆಂಟರ ಯೋಜನೆ ಮೂಲೆಗುಂಪಾದುದು ಶೋಚನೀಯ. ಏಕೆಂದರೆ ಅವರು ನಲವತ್ತು ವರ್ಷಗಳ ಹಿಂದೆ ಸೂಚಿಸಿದ ಯೋಜನೆಯ ಕೆಲವಾರು ಅಂಶಗಳ ಅವಶ್ಯಕತೆಯನ್ನು ನಾವೀಗ ಮನಗಾಣುತ್ತಿದ್ದೇವೆ.

ಆನಿ ಬೆಸೆಂಟ್‌ರವರು ಈ ಜಗತ್ತಿನ ಸ್ತ್ರೀವರ್ಗದಲ್ಲಿ ಅಗ್ರಪಂಕ್ತಿಗೆ ಸೇರ ತಕ್ಕವರೆಂಬುದು ನಿರ್ವಿವಾದವಾದ ವಿಚಾರ. ಅವರು ಎಲ್ಲವಿಧವಾದ ಅಜ್ಞಾನ ದಾಸ್ಯಗಳ ವಿರೋಧಿಯಾಗಿದ್ದರು. ಅವರು ಇಂಡಿಯಾದೇಶಕ್ಕೆ ಬರುವುದಕ್ಕೆ ಮೊದಲು, ಬ್ರಿಟನ್ನಿನಲ್ಲಿ ಸಾರ್ವಜನಿಕ ಸೇವೆಯನ್ನು ನಲ್ಲಿಸುತ್ತಿದ್ದ ಕಾಲದಲ್ಲಿ ಕಾರ್ಖಾನೆಗಳಲ್ಲಿ, ಗಣಿಗಳಲ್ಲಿ ಕೆಲಸಮಾಡುವ ಸ್ತ್ರೀಯರ ಸ್ಥಿತಿಗತಿಗಳನ್ನು ಉತ್ತಮಗೊಳಿಸಲು ಎಷ್ಟು ಶ್ರಮಿಸಿದರೆಂಬುದು ಲೋಕವಿಖ್ಯಾತವಾದ ವಿಚಾರ.

ಆನಿ ಬೆಸೆಂಟ್‌ರವರು ಇಂಡಿಯಾಕ್ಕೆ ಬಂದು, ಇಲ್ಲಿ ನೆಲಸಿ, ನಮ್ಮ ರಾಷ್ಟ್ರಜೀವನವನ್ನು ವಿವಿಧಮುಖಗಳಲ್ಲಿ ಉತ್ತಮಗೊಳಿಸಬೇಕೆಂಬ ಪ್ರಯತ್ನ ವನ್ನು ಕೈಗೊಂಡಾಗ, ನಮ್ಮ ದೇಶದ ಸ್ತ್ರೀಯರ ಸ್ಥಿತಿಗತಿಗಳನ್ನು ಉತ್ತಮ ಗೊಳಿಸಲು ಕೂಡ ಅವರು ತುಂಬಾ ಶ್ರಮಿಸಿದರು.

ಒಂದು ಜನಾಂಗದ ಅರ್ಧಭಾಗದಷ್ಟು ಮಂದಿ ಸ್ತ್ರೀಯರು. ಈ ಅರ್ಧ ವನ್ನು ದಾಸ್ಯದಲ್ಲಿ, ಅಜ್ಞಾನದಲ್ಲಿ ಮುಳುಗಿಸಿದ್ದರೆ, ಆ ರಾಷ್ಟ್ರ ಅವನತಿಯ ಹಾದಿ ಯನ್ನು ಹಿಡಿಯುವುದಲ್ಲದೆ, ಅಭಿವೃದ್ಧಿಹೊಂದಲು ಶಕ್ಯವೇ ಇಲ್ಲವೆಂಬುದು ಆನಿ ಬೆಸೆಂಟ್‌ರವರ ನಂಬಿಕೆಯಾಗಿತ್ತು. ಸ್ವಪ್ರಯತ್ನದಿಂದ ಅಪಾರ ಜ್ಞಾನ ವನ್ನುಗಳಿಸಿಕೊಂಡಿದ್ದ ಅವರು, ಸ್ತ್ರೀಯರು ವಿದ್ಯಾವತಿಯರಾದರೆ ಅದರಿಂದ ರಾಷ್ಟ್ರಕ್ಕೆ ಎಂಥ ಲಾಭವಾಗಬಹುದೆಂಬುದನ್ನು ಚೆನ್ನಾಗಿ ಮನಗಂಡಿದ್ದರು.

ಆದ್ದರಿಂದ ಅವರು ಇಂಡಿಯಾದಲ್ಲಿ ಸೇವಾಕಾರ್ಯವನ್ನಾರಂಭಿಸಿದೊಡ ನೆಯೇ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಗಮನಕೊಟ್ಟರು. ಈ ಮೊದಲೇ ಹೇಳಿರುವಂತೆ, ಕಾಶಿಯಲ್ಲಿ ಹೆಣ್ಣುಮಕ್ಕಳಿಗಾಗಿ ಒಂದು ವಿದ್ಯಾಶಾಲೆಯನ್ನಾ ರಂಭಿಸಿ, ಅದನ್ನು ಕಾಲಕ್ರಮದಲ್ಲಿ ಒಂದು ಕಾಲೇಜನ್ನಾಗಿ ಬೆಳಸಿದರು. ಈ ಶಾಲೆಯಲ್ಲೂ ಶಿಕ್ಷಣದ ಆದರ್ಶ, ಸೆಂಟ್ರಲ್ ಹಿಂದೂ ಕಾಲೇಜಿನಲ್ಲಿದ್ದಂತೆ, ವಿದ್ಯಾರ್ಥಿನಿಯರನ್ನು ದೇಶಪ್ರೇಮಿಗಳಾಗಿ, ಉತ್ತಮ ಪ್ರಜೆಗಳನ್ನು ಮಾಡುವುದೇ ಆಗಿತ್ತು.

ಭಾರತೀಯರು ತಮ್ಮ ಹೆಣ್ಣುಮಕ್ಕಳ ವಿಚಾರದಲ್ಲಿ ಹೆಚ್ಚು ಆಸಕ್ತಿ ವಹಿಸಬೇಕೆಂದು ಅವರು ಹೋದೆಡೆಯಲ್ಲೆಲ್ಲಾ ಪ್ರಚಾರ ಮಾಡಿದರು :

“ನೀವು ನಿಮ್ಮ ಹೆಣ್ಣುಮಕ್ಕಳನ್ನು, ಅವರ ಹಿತವನ್ನು ಗಮನಿಸದೆ ಉಪೇಕ್ಷಿಸುವಂತಿಲ್ಲ. ಹೆಣ್ಣುಮಕ್ಕಳಿಗೆ ಕೂಡ ವಿದ್ಯಾಭ್ಯಾಸ ದೊರೆಯುದವರೆಗೆ, ಅವರಿಗೆ ಸರಿಯಾದ ಶಿಕ್ಷಣ ದೊರೆಯುದವರೆಗೆ, ಅವರಿಗೆ ತಮ್ಮ ಪೂರ್ವಜರ ಮಹತ್ವ ಗೊತ್ತಾಗದವರೆಗೆ, ಇಂಡಿಯಾದೇಶ ಹಿಂದೆ ಎಂಥ ಹಿರಿಮೆಯನ್ನು ಗಳಿಸಿತ್ತು, ಮುಂದೆ ಅದರ ಉಜ್ವಲ ಭವಿಷ್ಯವೇನು ಎಂಬುದನ್ನು ತಮ್ಮ ತೊಡೆಯ ಮೇಲಾಡುವ ಮಕ್ಕಳಿಗೆ ತಿಳಿಸಿ ಹೇಳುವ ಸಾಮರ್ಥ್ಯ ನಿಮ್ಮ ಹೆಣ್ಣುಮಕ್ಕಳಿಗೆ ಉಂಟಾಗದವರೆಗೆ, ಇಂದಿನ ಭಾರತೀಯ ತಾಯಂದಿರು ಪೂರ್ವದ ಭಾರತ ಸ್ತ್ರೀ ರತ್ನಗಳಿಗೆ ತಕ್ಕಂಥ ಸಂತಾನವಾಗದವರೆಗೆ, ಅವರು ತಮ್ಮ ಗಂಡಸರಂತೆ, ಗಂಡಸರಷ್ಟೇ ದೇಶಪ್ರೇಮಿಗಳಾಗದವರೆಗೆ, ಶಾಲೆಯಲ್ಲಿ ಪಾಠಕಲಿಯುತ್ತ ಬೊಂಬೆಗಳನ್ನಿಟ್ಟುಕೊಂಡು ಆಟವಾಡುತ್ತಿರಬೇಕಾದ ವಯಸ್ಸಿನಲ್ಲಿ ಹೆಂಡತಿಯಾಗುವ, ತಾಯಿಯಾಗುವ ಶಾಪಗ್ರಸ್ತ ಸ್ಥಿತಿಯಿಂದ ನಿಮ್ಮ ಹೆಣ್ಣುಮಕ್ಕಳು ಪಾರಾಗದೇ ಇರುವವರೆಗೆ, ವಿದ್ಯಾಭ್ಯಾಸ ಮುಗಿಯದೆ ವಿವಾಹಿತರಾಗಕೂಡದೆಂಬ ನಿಯಮವನ್ನು ಅನುಷ್ಠಾನದಲ್ಲಿಟ್ಟಿದ್ದ ಬ್ರಹ್ಮಚರ್ಯ ವ್ಯವಸ್ಥೆಯನ್ನು ಮತ್ತೆ ಆಚರಣೆಗೆ ತರದವರೆಗೆ, ಈ ಮೊದಲು ಹೇಳಿದ ಒಂದೊಂದಂಶವನ್ನು ನೀವು ಆಚರಣೆಗೆ ತರದೆ ಇರುವವರೆಗೆ ನಿಮ್ಮ ದೇಶ, ನಿಮ್ಮ ಇಂಡಿಯಾದೇಶ ಇಂದಿರುವಂತೆ, ದುರ್ಬಲವಾಗಿಯೇ ಉಳಿಯಬೇಕಾಗುತ್ತದೆ. ನಿಮ್ಮ ರಾಷ್ಟ್ರದ ಭಾವಿ ಹಿರಿಮೆಗಾಗಿ ದುಡಿಯಲು ಅವಶ್ಯಕವಾಗಿ ಬೇಕಾದ, ಬುದ್ಧಿಕುಶಲತೆ ನಿಮ್ಮ ಗಂಡುಮಕ್ಕಳಲ್ಲಿ, ನಿಮ್ಮ ಹೆಣ್ಣುಮಕ್ಕಳಲ್ಲಿ ವಿಕಾಸಗೊಳ್ಳುವವರೆಗೆ, ನಿಮ್ಮ ನಾಡಿನಲ್ಲಿದ್ದವ ಯಾಜ್ಞವಲ್ಕ್ಯನೊಬ್ಬನಲ್ಲ, ಒಬ್ಬಳು ಮೈತ್ರೇಯಿ ಕೂಡ ಇದ್ದಳು ಎಂಬುದನ್ನು ನೀವು ನೆನಪಿನಲ್ಲಿಡದವರೆಗೆ, ಜ್ಞಾನಾರ್ಜನೆಯು ನಿಮ್ಮ ಗಂಡುಮಕ್ಕಳ ಆಜನ್ಮಸಿದ್ಧವಾದ ಹಕ್ಕಾಗಿರುವಂತೆ, ಅದು ನಿಮ್ಮ ಹೆಣ್ಣುಮಕ್ಕಳ ಆಜನ್ಮಸಿದ್ಧವಾದ ಹಕ್ಕೂ ಆಗಿದೆಯೆಂಬುದನ್ನು ನೀವು ನೆನಪಿನಲ್ಲಿಡದವರೆಗೆ, ಆಧುನಿಕ ಭಾರತ ಸ್ತ್ರೀ

ಯಾವುದನ್ನು ಕೇಳಲೂಕೂಡದೆಂದು ನೀವು ನಿಷೇಧಿಸುವಿರೋ ಅಂಥ ವೇದದ ಕೆಲವು ಭಾಗಗಳನ್ನು ರಚಿಸಿದವರು ಪ್ರಾಚೀನ ಭಾರತ ಸ್ತ್ರೀಯರು ಎಂಬುದನ್ನು ನೀವು ನೆನಪಿನಲ್ಲಿಡದವರೆಗೆ, ಭಾರತವರ್ಷ ವನ್ನು ಮತ್ತೆ ಅದರ ಪ್ರಾಚೀನ ಘನತೆಗೇರಿಸುವುದಕ್ಕಾಗಿ, ಭಾರತ ವರ್ಷದ ಭವಿಷ್ಯವು ಅದರ ಪ್ರಾಚೀನತೆಗೆ ತಕ್ಕಂತೆ ಉಜ್ವಲವಾಗಿ ರುವಂತೆ ಮಾಡುವುದಕ್ಕಾಗಿ ನೀವು ಭಾರತವರ್ಷದ ಪ್ರಾಚೀನ ಮಹತ್ವ ವನ್ನು ಮರೆಯದೆ ನೆನಪಿನಲ್ಲಿಡದವರೆಗೆ, ಇಂಡಿಯಾದ ಪುನರುತ್ಥಾನ ವಾಗಲಾರದು.

ಆನಿ ಬೆಸೆಂಟ್‌ರವರ ವೀರವಾಣಿ ಇಡೀ ನಾಡಿನಮೇಲೆಲ್ಲಾ ಹೀಗೆ ಗುಡುಗಿ, ನಿದ್ರಾಸ್ಥರಾಗಿದ್ದ ಭಾರತೀಯರನ್ನು ಎಚ್ಚರಗೊಳಿಸಿತು; ತಾವು ತುಳಿದಿಟ್ಟಿದ್ದ, ದುರ್ಲಕ್ಷಿಸಿದ್ದ ಸ್ತ್ರೀಯರ ಸ್ಥಿತಿಗತಿಗಳನ್ನು ಉತ್ತಮಗೊಳಿಸ ಬೇಕೆಂಬ ಹೊಣೆಗಾರಿಕೆಯ ಬುದ್ಧಿ ಭಾರತೀಯರಲ್ಲಿ ಬೆಳೆಯುವಂತೆ ಮಾಡಿತು. "ಎಲ್ಲಿ ನಾರಿಯರಿಗೆ ಪೂಜ್ಯತೆಯಿದೆಯೋ ಅಲ್ಲಿ ದೇವತೆಗಳು ಸಂತೋಷ ಚಿತ್ತರಾಗಿರುತ್ತಾರೆ" ಎಂಬ ಮನುವಿನ ಆದೇಶವನ್ನು ಭಾರತೀ ಯರು ನೆನಪಿಗೆ ತಂದುಕೊಂಡು, ಅವಕ್ಕನುಸಾರವಾಗಿ ನಡೆಯುವಂತೆ ಪ್ರೇರೇಪಿಸಿತು.

ಇಂದು ನಮ್ಮದೇಶದಲ್ಲಿ ಸ್ತ್ರೀ ವಿದ್ಯಾಭ್ಯಾಸ ವಿಸ್ತಾರಗೊಳ್ಳುತ್ತಿರುವು ದಕ್ಕೆ, ಭಾರತ ಸ್ತ್ರೀಯರು ಅಂತರ ರಾಷ್ಟ್ರೀಯ ಸಭೆಗಳ ಅಧ್ಯಕ್ಷರಾಗಿ, ವಿದೇಶಗಳಲ್ಲಿ ರಾಯಭಾರಿಗಳಾಗಿ, ಸ್ವದೇಶದಲ್ಲಿ ಮಂತ್ರಿಗಳಾಗಿ, ಶಾಸನಸಭಾ ಸದರಾಗಿ, ಸಮಾಜ ಸೇವಕರಾಗಿ, ಕಲೋಪಾಸಕರಾಗಿ ಖ್ಯಾತಿಯನ್ನು ಗಳಿಸಿ, ಭಾರತದ ಕೀರ್ತಿ ಬೆಳೆಯಲು, ಎಲ್ಲೆಲ್ಲೂ ಬೆಳಗಲು ಸಹಾಯಕರಾಗಿರುವು ದಕ್ಕೆ, ಆನಿ ಬೆಸೆಂಟ್‌ರು ಭಾರತ ಸ್ತ್ರೀಯರ ಅಭ್ಯುದಯಕ್ಕಾಗಿ ಕೈಗೊಂಡ ಕಾರ್ಯಕ್ರಮಗಳು ಬಹುಮಟ್ಟಿಗೆ ಕಾರಣವೆಂದರೆ ತಪ್ಪಾಗಲಾರದು. ಭಾರತ ಸ್ತ್ರೀಯರು ನಮ್ಮ ರಾಷ್ಟ್ರದ ಹೋರಾಟದಲ್ಲಿ ಗಣನೀಯಪಾತ್ರವನ್ನು ವಹಿ ಸಿದ್ದರೆ, ಆನಿ ಬೆಸೆಂಟರು ನಮ್ಮ ಸ್ತ್ರೀಯರಲ್ಲಿ ಉಂಟುಮಾಡಿದ ಜಾಗ್ರತಿ ಅದಕ್ಕೆ ಒಂದು ಮುಖ್ಯ ಕಾರಣವೆಂದು ಧಾರಾಳವಾಗಿ ಹೇಳಬಹುದು. ಇಂದು ನಮ್ಮನಾಡಿನ ಸ್ತ್ರೀಯರ ಆರ್ಥಿಕ ಸಾಮಾಜಿಕ ಸ್ಥಿತಿಗಳನ್ನು ಶಾಸನಮುಖೇನ

ಉತ್ತಮಗೊಳಿಸಲು ಬಲವಾದ ಪ್ರಯತ್ನಗಳು ನಡೆಯುತ್ತಿರುವುದಕ್ಕೆ ಆನಿ ಬೆಸೆಂಟರು ಭಾರತಸ್ತ್ರೀಯರಲ್ಲಿ ಪ್ರಚೋದಿಸಿದ ಆತ್ಮಗೌರವವೇ ಕಾರಣ ಎನ್ನಬಹುದು.

ಜಗದ್ಭ್ರಾತೃತ್ವವನ್ನು ಬೋಧಿಸಿದ ಆನಿ ಬೆಸೆಂಟರು, ಸ್ತ್ರೀಪುರುಷರಲ್ಲಿ ಸಮಾನತೆಯಿರಬೇಕೆಂಬುದನ್ನು ಒಪ್ಪಿದರೂ, ಸಂಸಾರದಲ್ಲಿ, ಸಾಮಾಜಿಕ ಜೀವನದಲ್ಲಿ ಸ್ತ್ರೀಯರಿಗೆ ಮೀಸಲಾದ ಕೆಲವು ಕರ್ತವ್ಯಗಳಿವೆಯೆಂದೂ, ಅವನ್ನು ದಕ್ಷತೆಯಿಂದ ನೆರವೇರಿಸಬೇಕಾದ್ದು ಪ್ರತಿಸ್ತ್ರೀಯ ಕರ್ತವ್ಯವೆಂದೂ ಒತ್ತಿ ಹೇಳುತ್ತಿದ್ದರು. "ಸ್ತ್ರೀ ತಾಯಿಯಾಗಿರಬೇಕೆಂಬುದು ನಿಸರ್ಗದ ಉದ್ದೇಶ" ಎಂದು ಅವರು ಸಾರಿಸಾರಿ ಹೇಳುತ್ತಿದ್ದರು. ತಮ್ಮ ಪರಿಚಯದ ಎಳೆಯ ಹೆಣ್ಣುಮಕ್ಕಳಿಗೆ, "ಮನೆಯನ್ನು ಶುಭ್ರವಾಗಿ, ಮನೆಯವರಿಗೆಲ್ಲಾ ಹರ್ಷದಾಯಕವಾಗುವಂತೆ ಇಟ್ಟುಕೊಳ್ಳುವುದನ್ನು ಕಲಿಯಬೇಕು. ಚೆನ್ನಾಗಿ ಅಡಿಗೆಮಾಡುವುದನ್ನು ಕಲಿಯಬೇಕು." ಎಂದು ಹೇಳುತ್ತಿದ್ದರು. ಅಷ್ಟು ಮಾತ್ರವಲ್ಲ. ನಿಕಟಪರಿಚಯವುಳ್ಳ ನವದಂಪತಿಗಳ ಮನೆಗೆ ಆಗಿಂದಾಗ್ಗೆ ಊಟಕ್ಕೆ ಹೋಗಿ ಅವರು ತಮ್ಮ ಈ ಸೂಚನೆಯನ್ನು ಆಚರಣೆಗೆ ತಂದಿದ್ದಾರೆಯೋ ಇಲ್ಲವೋ ಎಂದು ಪರೀಕ್ಷಿಸುತ್ತಿದ್ದುದುಕೂಡ ಉಂಟು. ಸ್ತ್ರೀಯಲ್ಲಿ ಸ್ವಾಭಾವಿಕವಾಗಿ, ಕಲಾಸಕ್ತಿಯಿದೆ. ಅದು ವಿಕಾಸಗೊಳ್ಳುವಂತೆ ಮಾಡಬೇಕು ಎಂಬುದು ಆನಿಬೆಸೆಂಟ್‌ರವರ ಅಭಿಪ್ರಾಯವಾಗಿತ್ತು.

ಇಂದು ಭಾರತದ ಪ್ರಮುಖ ನಾಟ್ಯಕಲಾವಿದೆಯೆಂದು ಖ್ಯಾತರಾಗಿರುವ ರುಕ್ಮಿಣೀದೇವಿಯವರು "ನಾಟ್ಯವನ್ನು ಕಲಿಯಬೇಕೆಂಬ ಅಭಿಲಾಷೆಯುಂಟಾಗಿದೆ" ಎಂದು ಹೇಳಿದಾಗ, ಆ ಮಾತು ಕೇಳಿದ ಕೆಲವರು ಅವರ ಅಭಿಪ್ರಾಯವನ್ನು ವ್ಯಂಗ್ಯವಾಗಿ ಖಂಡಿಸಿದರು. ಅಂಥ ಮಾತನ್ನು ಲಕ್ಷ್ಯ ಮಾಡದೆ, ಭರತನಾಟ್ಯವನ್ನು ಕಲಿಯಬೇಕೆಂದು ರುಕ್ಮಿಣೀದೇವಿಯವರನ್ನು ಪ್ರೇರೇಪಿಸಿ ಅವರ ಬೆಂಬಲಕ್ಕೆ ನಿಂತವರು ಆನಿ ಬೆಸೆಂಟರು.

ರುಕ್ಮಿಣೀದೇವಿಯವರು ಭರತನಾಟ್ಯವನ್ನು ಕಲಿತು ಮೊದಲನೆಯ ರಂಗಪ್ರದರ್ಶನ ಕೊಡುವ ಹೊತ್ತಿಗೆ ಆನಿ ಬೆಸೆಂಟರ ಆರೋಗ್ಯ ಕೆಟ್ಟಿದ್ದು ಅವರು ಪ್ರದರ್ಶನಕ್ಕೆ ಬರುವುದು ಸಾಧ್ಯವಾಗಲಿಲ್ಲ. ಆ ಪ್ರದರ್ಶನ ಸೊಗಸಾಗಿತ್ತೆಂಬ ವರದಿಯನ್ನು ಕೇಳಿ ಅವರು ಸಂತೋಷಿಸಿದ್ದು ಮಾತ್ರ

ವಲ್ಲದೆ, ರುಕ್ಮಿಣೀದೇವಿಯವರ ನಾಟ್ಯವನ್ನು ನೋಡಲು ಬಯಸಿ, ಅವರನ್ನು ತಮ್ಮ ನಿವಾಸಕ್ಕೆ ಕರೆಸಿಕೊಂಡು ಅವರ ನಾಟ್ಯವನ್ನು ನೋಡಿ ಆನಂದಿಸಿದರು.

ರುಕ್ಮಿಣೀದೇವಿಯವರಿಗೆ ಅವರು ಅಂದು ಕೊಟ್ಟ ಪ್ರೋತ್ಸಾಹವೇ ಇಂದು ಅಡ್ಯಾರಿನ "ಕಲಾಕ್ಷೇತ್ರ"ವಾಗಿ ಅರಳಿದೆ. ನಾಟ್ಯ, ಚಿತ್ರಕಲೆ, ಶಿಲ್ಪ, ಸಂಗೀತ, ನೇಯ್ಗೆ ಮುಂತಾದ ಹಲವಾರು ಕಲೆಗಳಲ್ಲಿ ಉತ್ತಮ ಶಿಕ್ಷಣವನ್ನು ಕೊಡುವ ಕೇಂದ್ರವಾಗಿದೆ.

ಹೀಗೆ ಆನಿ ಬೆಸೆಂಟ್‌ರವರ ಪ್ರೇರಣೆ, ಸಹಾನುಭೂತಿಗಳಿಂದಾಗಿ, ನಾನಾರೀತಿಯ ಸಮಾಜ ಸೇವೆಯಲ್ಲಿ ತೊಡಗಿದ ಹಲವಾರು ಭಾರತ ಸ್ತ್ರೀಯರಿದ್ದಾರೆ ಭಾರತವರ್ಷದಲ್ಲಿ.

ಕೊನೆಯದಾಗಿ, ಆನಿ ಬೆಸೆಂಟರು ಭಾರತಸ್ತ್ರೀಯರಿಗಾಗಿ ಕಟ್ಟಿದ ಒಂದು ಮಹಾಸಂಸ್ಥೆಯನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದು.

ಆನಿ ಬೆಸೆಂಟ್‌ರವರು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಅಧ್ಯಕ್ಷತೆ ವಹಿಸುವುದಕ್ಕೆ ಕೆಲವು ತಿಂಗಳುಗಳು ಮುಂಚೆ ಎಂದರೆ ೧೯೧೭ನೇ ಮೇ ಎಂಟನೇ ತಾರೀಖು ಅಡ್ಯಾರ್‌ನಲ್ಲಿ "ವುಮನ್ಸ್ ಇಂಡಿಯನ್ ಅಸೋಸಿಯೇಷನ್" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಅನೇಕ ಮಂದಿ ಸುಶಿಕ್ಷಿತ ಸ್ತ್ರೀಯರನ್ನು ಆ ಸಂಸ್ಥೆಯ ಸದಸ್ಯರನ್ನಾಗಿ ಸೇರಿಸಿದರು. ತಾವೇ ಈ ಸಂಸ್ಥೆಯ ಅಧ್ಯಕ್ಷತೆಯ ಹೊಣೆಗಾರಿಕೆಯನ್ನು ಹೊತ್ತು ಈ ಸಂಸ್ಥೆ ಆಸೇತು ಹಿಮಾಚಲ ಪರಿಯಂತ ಹಬ್ಬುವಂತೆ ಮಾಡಿದರು. ಈ ಸಂಸ್ಥೆಯ ಶಾಖೆ ಸ್ಥಳೀಯ ಸಂಸ್ಥೆಗಳು ತಮ್ಮ ತಮ್ಮ ಪ್ರದೇಶಗಳಲ್ಲಿ ಸ್ತ್ರೀ ವಿದ್ಯಾಭ್ಯಾಸ, ಸ್ತ್ರೀಯರ ಸ್ಥಿತಿಗತಿಗಳ ಸುಧಾರಣೆಗಳಿಗೆ ಮನಗೊಟ್ಟುವು.

ಆನಿ ಬೆಸೆಂಟರು ಸ್ಥಾಪಿಸಿದ ಈ ಸಂಸ್ಥೆಯೇ ಕಾಲಕ್ರಮದಲ್ಲಿ "ಆಲ್-ಇಂಡಿಯಾ ವುಮನ್ಸ್ ಕಾನ್ಫರೆನ್ಸ್" ಆಗಿ ರೂಪುಗೊಂಡು, ಭಾರತವರ್ಷದ ಸ್ತ್ರೀಯರ ಪ್ರತಿನಿಧಿ ಸಂಸ್ಥೆಯಾಗಿ ಪರಿಣಮಿಸಿತು. ಭಾರತಸ್ತ್ರೀಯರಿಗೆ ಓಟಿನ ಹಕ್ಕನ್ನು ಕೊಡಬೇಕೆಂದು ಚಳವಳಿ ಹೂಡಿದ ಕೀರ್ತಿ ಆನಿ ಬೆಸೆಂಟರು ಸ್ಥಾಪಿಸಿದ ಈ ಸ್ತ್ರೀ ಸಂಸ್ಥೆಗೆ ಸೇರಿದ್ದು. ಅಲ್ಲದೆ, ಬಾಲ್ಯವಿವಾಹದ

ವಿರುದ್ಧ ಆನಿ ಬೆಸೆಂಟರು ಆರಂಭಿಸಿದ ಚಳವಳಿಯನ್ನು ಮುಂದುವರೆಸಿ, ಆ ಬಗ್ಗೆ ಶಾಸನವಾಗುವಂತೆ ಮಾಡಿದ್ದು ಮಾತ್ರವಲ್ಲದೆ, ಜನರು ಬಾಲ್ಯವಿವಾಹದ ಪದ್ಧತಿಯನ್ನು ಬಿಟ್ಟುಬಿಡಲು ಪ್ರೇರೇಪಿಸಿದ ಕೀರ್ತಿ ಕೂಡ ಈ ಸಂಸ್ಥೆಗೆ ಸೇರಿದ್ದು.

ಹೀಗೆ ಆನಿ ಬೆಸೆಂಟರ ಸೇವೆಯಿಂದ ಭಾರತಸ್ತ್ರೀವರ್ಗ ಹಲವಾರು ರೀತಿಯಿಂದ ಪುಷ್ಟಿಗೊಂಡಿತು; ತೇಜಸ್ವಿಯಾಯಿತು. ಆದ್ದರಿಂದ ಅದು ಅವರಿಗೆ ಚಿರಋಣಿ.

ಜನಾಂಗ ಜೀವನದಲ್ಲಿ ಬಾಲಕ ಬಾಲಕಿಯರ ಮತ್ತು ತರುಣ ತರುಣಿಯರ ಸ್ಥಾನ ಬಹು ಮುಖ್ಯವಾದದ್ದು. ಏಕೆಂದರೆ, ಅವರು ಮುಂದೆ ಜನಾಂಗ ಜೀವನದ ಸೂತ್ರಗಳನ್ನು ಹಿಡಿದು ಅದನ್ನು ನಡೆಸತಕ್ಕವರು. ಈ ಹೊಣೆಗಾರಿಕೆಯನ್ನು ನಿರ್ವಹಿಸುವ ಶಕ್ತಿ ಅವರಿಗಿಲ್ಲದೆಹೋದರೆ, ಅದರ ಪರಿಣಾಮವಾಗಿ ರಾಷ್ಟ್ರ ತಾನಾಗಿ ಅವನತಿಯ ಮಾರ್ಗವನ್ನು ಹೊಂದುವುದು. ಇದು ಐತಿಹಾಸಿಕ ಸತ್ಯ.

ಇದನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದ ಆನಿ ಬೆಸೆಂಟ್‌ರವರು ಭಾರತೀಯ ಬಾಲಕ ಬಾಲಕಿಯರನ್ನು ತರುಣ ತರುಣಿಯರನ್ನು ಭಾರತ ವರ್ಷದ ಉತ್ತಮ ಪ್ರಜೆಗಳನ್ನಾಗಿ ರೂಪುಗೊಳಿಸಲು ನಾನಾ ವಿಧವಾದ ಪ್ರಯತ್ನಗಳನ್ನು ಮಾಡಿದರು.

ಈ ಮೊದಲೇ ಹೇಳಿರುವಂತೆ ಅವರು ವಿದ್ಯಾಶಾಲೆಗಳನ್ನು ಸ್ಥಾಪಿಸಿ, ಅವುಗಳ ಮೂಲಕ ಬಾಲಕ ಬಾಲಕಿಯರಲ್ಲಿ ರಾಷ್ಟ್ರೀಯ ಭಾವನೆ ಬೆಳೆಯುವಂತೆ ಮಾಡಿದರು. ಭಾರತೀಯರ ಪೂರ್ವಚರಿತ್ರೆ, ಆದರ್ಶ, ಸಾಧನೆಗಳು, ಎಷ್ಟು ಮಹತ್ತರವಾದುವೆಂಬುದನ್ನು ನಮ್ಮ ರಾಷ್ಟ್ರದ ಬಾಲಕ ಬಾಲಕಿಯರಿಗೆ ತಿಳಿಸುವ ಉದ್ದೇಶದಿಂದ, ಆಕರ್ಷಕವಾದ, ಉದ್ಬೋಧಕವಾದ ರೀತಿಯಲ್ಲಿ ರಾಮಾಯಣ ಮಹಾಭಾರತಗಳ ಕಥೆಯನ್ನು ಬರೆದು ಪ್ರಕಟಿಸಿದರು. ಸಾಧ್ಯವಾದೆಡೆಗಳಲ್ಲಿ ಬಾಲಕ ಬಾಲಕಿಯರಿಗೆ ತಾವೇ, ತಮ್ಮ ಅನುಪಮ ಶೈಲಿಯಲ್ಲಿ ಈ ಕಥೆಗಳನ್ನು ಹೇಳಿ, ಅವರು ಆದರ್ಶಪ್ರೇಮಿಗಳಾಗುವಂತೆ ಮಾಡಿದರು. ರಜಪೂತ ವೀರರ ಮತ್ತು ವೀರ ರಮಣಿಯ ಸಾಹಸದ ಕಥೆಗಳನ್ನೊಳಗೊಂಡ "ಮಾತೃಭೂಮಿಯ ಮಕ್ಕಳು" ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದರು. ಮಕ್ಕಳಿಗಾಗಿ ಉತ್ತಮವಾದ ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಪ್ರಕಟಿಸಲು ಪ್ರಯತ್ನಿಸಿದವರಿಗೆ ಧನ ಸಹಾಯವನ್ನೂ ಮಾಡಿದರು.

ಮಕ್ಕಳು ಯಾವ ವಿಧವಾದ ಭೀತಿಯೂ ಇಲ್ಲದ ವಾತಾವರಣದಲ್ಲಿ

ಬೆಳೆಯಬೇಕು. ಏಕೆಂದರೆ ಅವರು ಮಾಡುವ ಅನೇಕ ತಪ್ಪಿತಗಳಿಗೆಲ್ಲಾ ಒಂದಲ್ಲ ಒಂದು ಕಾರಣಕ್ಕಾಗಿ ಅವರನ್ನು ಆವರಿಸಿದ ಭೀತಿಯೇ ಕಾರಣ ವಾಗಿರುತ್ತದೆ. ಇಂಥಾ ಭೀತಿ ಪ್ರಚೋದಿತ ತಪ್ಪಿತಗಳ ಮತ್ತು ಅವುಗಳ ಪ್ರತಿಫಲದ ಛಾಯೆ ಅವರು ದೊಡ್ಡವರಾದಮೇಲೆ ಕೂಡ ಅವರ ಮನಸ್ಸನ್ನು ಕಾಡಿಸುತ್ತಿರುತ್ತದೆ; ಅವರ ಚರ್‍ಯೆಯಲ್ಲಿ ತಲೆಹಾಕುತ್ತಿರುತ್ತದೆ – ಎಂಬುದು ಆನಿ ಬೆಸೆಂಟರ ಅಭಿಪ್ರಾಯವಾಗಿತ್ತು. ಆದ್ದರಿಂದ ಮಕ್ಕಳು ಹೆದರಿಕೆಯಿಲ್ಲದ ಆದರೆ ಒಳ್ಳೆ ಶಿಸ್ತುಳ್ಳ ವಾತಾವರಣದಲ್ಲಿ ಬೆಳೆಯಬೇಕೆಂಬುದು ಅವರ ಅಭಿಲಾಷೆಯಾಗಿತ್ತು.

ಈ ಅಭಿಲಾಷೆಯನ್ನು ಕೈಗೂಡಿಸಿಕೊಳ್ಳುವುದು ಸುಲಭಸಾಧ್ಯವಲ್ಲ ವೆಂಬುದು ಯಾರಿಗಾದರೂ ಹೊಳೆಯುವ ವಿಚಾರ. "ಹೆದರಿಕೆಯಿಲ್ಲದ ಮತ್ತು ಒಳ್ಳೆ ಶಿಸ್ತುಳ್ಳ" ವಾತಾವರಣ ಮನೆಮನೆಯಲ್ಲೂ ಶಾಲೆ ಶಾಲೆಗಳಲ್ಲೂ ಸ್ಥಾಪಿಸ ಲ್ಪಡಬೇಕೆಂದರೆ ಅದು ಸುಲಭವೇ ? ಆದರೂ ಆನಿ ಬೆಸೆಂಟ್‌ರವರು ಈ ಬಗ್ಗೆ ಪ್ರಯತ್ನಗಳನ್ನು ಮಾಡಿದರು. ಶಿಶುಶಿಕ್ಷಣವೇತ್ತರಾದ ಮಾಂಟೆಸೋರಿಯವರ ಶಿಕ್ಷಣ ಪದ್ಧತಿಯನ್ನು ನಮ್ಮ ದೇಶದಲ್ಲಿ ಆಚರಣೆಗೆ ತರಲು ಅವರು ಶ್ರಮಿಸಿ ದರು. ಡಾ. ಮಾಂಟೆಸೋರಿಯವರು ಅಡ್ಯಾರಿನಲ್ಲಿ ಬಂದು ನೆಲೆಸಿ, ತಮ್ಮ ಶಿಕ್ಷಣಪದ್ಧತಿಯ ಬಗ್ಗೆ ಉಪಾಧ್ಯಾಯರಿಗೆ ಶಿಕ್ಷಣ ಕೊಡಲು ಸಾಧ್ಯವಾದುದು ಆನಿ ಬೆಸೆಂಟರ ಪ್ರಭಾವದಿಂದಲೇ.

ಎಳೆಯ ವಯಸ್ಸಿನ ಗಂಡು ಹೆಣ್ಣುಮಕ್ಕಳಲ್ಲಿ ಸದ್ವೃತ್ತಿಯನ್ನುಂಟು ಮಾಡುವ ಉದ್ದೇಶದಿಂದ ಅವರು ೧೯೦೮ ರಲ್ಲಿ "ಭಾರತ ಕುಮಾರರು ಮತ್ತು ಭಾರತ ಕುಮಾರಿಯರು" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಈ ಬಾಲ ದಳಕ್ಕೆ ಸೇರಿದವರಲ್ಲಿ ಸಹೋದರ ಭಾವ ಸೇವಾಭಾವಗಳನ್ನು ಬೆಳೆಸಲು ತಕ್ಕ ಕಾರ್‍ಯಕ್ರಮಗಳನ್ನು ವಿಧಿಸಿದರು. ಈ ಸಂದರ್ಭದಲ್ಲಿ ಆನಿ ಬೆಸೆಂಟ್‌ರವರು ಇಂಡಿಯಾದೇಶದಲ್ಲಿ ಸ್ಕೌಟ್ ಚಳವಳಿಯ ಬೇರೂರಲು ಸಲ್ಲಿಸಿದ ಸೇವೆ ನೆನಪಿಗೆ ಬರುತ್ತದೆ. ಇದು ತುಂಬಾ ಸ್ವಾರಸ್ಯವಾದ ಮತ್ತು ಗಣನೀಯ ವಾದ ಘಟನೆ. ಆನಿ ಬೆಸೆಂಟ್‌ರವರು ಸ್ಕೌಟ್ ಚಳವಳಿಯಲ್ಲಿ ಆಸಕ್ತರಾದ ಪ್ರಸಂಗ ಉಲ್ಲೇಖನೀಯವಾದದ್ದು.

೧೯೧೬ರಲ್ಲಿ ಆರ್‍ಯರತ್ನನೆಂಬೊಬ್ಬ ವಿದ್ಯಾರ್ಥಿ ಬಂದ, ಸಿಂಹಳದ್ವೀಪದಿಂದ;

–ಮದನಪಲ್ಲಿಯ ಥಿಯಸಾಫಿಕಲ್ ಕಾಲೇಜಿನಲ್ಲಿ ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸಲು. ಆತ, ಸಿಂಹಳದಲ್ಲಿ ಓದುತ್ತಿದ್ದಾಗ, ಬೇಡನ್ ಪೊವೆಲ್ ರವರ ಬಾಯ್ಸ್ ಸ್ಕೌಟ್ಸ್ ಚಳವಳಿಗೆ ಸೇರಿ, ಆ ಚಳವಳಿಯ ಬಗೆಗೆ ಖಚಿತ ವಾದ ತಿಳುವಳಿಕೆಯನ್ನೂ ಪ್ರಬಲವಾದ ಆಸಕ್ತಿಯನ್ನೂ ಪಡೆದಿದ್ದ.

ಅವನು ಮದನಪಲ್ಲಿಗೆ ಬಂದಮೇಲೆ ತನ್ನ ಕಾಲೇಜಿನಲ್ಲಿ ಸ್ಕೌಟ್ ಚಳವಳಿಯಿಲ್ಲದಿದ್ದುದನ್ನು ಕಂಡು, ಕೆಲವು ತಿಂಗಳೊಳಗಾಗಿ ಅಲ್ಲಿ ಒಂದು ಸ್ಕೌಟ್ ದಳವನ್ನು ಸ್ಥಾಪಿಸಿದ. ಅದು ಸುವ್ಯವಸ್ಥಿತವಾದಮೇಲೆ, ಆ ಸಂಸ್ಥೆ ಯನ್ನು ಅಂಗೀಕರಿಸುವಂತೆ ಬೇಡನ್ ಪೊವೆಲ್‌ರವರ ಲಂಡನ್ ಕಾರ್ಯಾಲ ಯಕ್ಕೆ ಅರ್ಜಿ ಹಾಕಿಕೊಂಡ.

ಆ ಅರ್ಜಿಗೆ ಉತ್ತರವಾಗಿ ಲಂಡನ್ ಕಾರ್ಯಾಲಯದಿಂದ ಒಂದು ವಿಚಿತ್ರವಾದ ಕಾಗದ ಬಂತು. "ಸ್ಕೌಟ್ ಚಳವಳಿಗೆ ಸಂಬಂಧಿಸಿದಂತೆ ಇಂಡಿಯಾದಲ್ಲಿರುವ ಬ್ರಿಟಿಷ್ ಅಧಿಕಾರಿಗಳ ಸಂಖ್ಯೆ ತುಂಬಾ ಕಡಿಮೆಯಾ ಗಿದೆಯಾಗಿ, ಯುದ್ಧ (ಆಗ ಮೊದಲನೆಯ ಮಹಾಯುದ್ಧ ನಡೆದಿತ್ತು) ಮುಗಿ ಯುವವರೆಗೆ ಭಾರತೀಯರಲ್ಲಿ ಸ್ಕೌಟ್ ಚಳವಳಿಯನ್ನು ಬೆಳೆಯಗೊಡಲು ಸಾಧ್ಯವಿಲ್ಲ" ಎಂದು!

ಈ ವಿಚಾರ ಆನಿ ಬೆಸೆಂಟ್‌ರವರಿಗೆ ತಿಳಿದೊಡನೆಯೇ ಅವರು ಈ ಅನ್ಯಾ ಯದ ವಿರುದ್ಧ ಹೋರಾಟವನ್ನಾರಂಭಿಸಿದರು. ತಾವು ಉತ್ತಮ ಜನಾಂಗ ದವರೆಂದು ಭಾವಿಸುವ ಬ್ರಿಟಿಷರು, ತಮ್ಮ ನೆರವಿಲ್ಲದೆ, ಭಾರತೀಯರು ಯಾವ ಕೆಲಸವನ್ನೂ ಮಾಡಲು ಅನರ್ಹರೆಂದು ಭಾವಿಸಿ ಈ ರೀತಿ ಅವಮಾನ ಕರವಾಗಿ ನಡೆದುಕೊಂಡಿದ್ದಾರೆಂದು ನಿರ್ಧರಿಸಿ ಅದಕ್ಕೆ ತಕ್ಕ ಚಿಕಿತ್ಸೆಯನ್ನು ಕೈಗೊಂಡರು. ಭಾರತೀಯ ತರುಣರನ್ನು ಹೆಚ್ಚು ಆರೋಗ್ಯವಂತರನ್ನಾಗಿ, ಸಾಹಸಿಗಳನ್ನಾಗಿ, ಉತ್ತಮ ಪ್ರಜೆಗಳನ್ನಾಗಿ, ಸೇವಾತತ್ಪರರನ್ನಾಗಿ ಮಾಡುವ ಕಾರ್ಯದಲ್ಲಿ ಈ ಹೊರಗಿನವರ ಪೌರೋಹಿತ್ಯವೇಕೆ?– ಎಂದು ಆನಿ ಬೆಸೆಂಟರು ಪ್ರಶ್ನಿಸಿ ತಾಂಣಿ ಸಿಸ್ಥ ಮತ್ತು ಕೆ. ಸಂಜೀವಕಾಮತ್‌ರವರ ನೆರವು ಪಡೆದು ೧೯೧೭ರಲ್ಲಿ "ಇಂಡಿಯನ್ ಬಾಯ್ಸ್ ಸ್ಕೌಟ್ ಅಸೋಸಿಯೇಷನ್" ಎಂಬ ಸ್ವತಂತ್ರ ಸಂಸ್ಥೆಯನ್ನು ಸ್ಥಾಪಿಸಿದರು. ಆನಿ ಬೆಸೆಂಟ್‌ರು ರಾಜಕೀಯ ರಂಗದಲ್ಲಿ ತುಂಬಾ ಚುರುಕಾಗಿ ಕೆಲಸ ಮಾಡುತ್ತಿದ್ದ ಕಾಲ ಅದು. ಆದರೂ

ಅವರು ಸ್ಕೌಟ್ ಚಳವಳಿಗೆ ತುಂಬಾ ಗಮನಕೊಟ್ಟು ಅದನ್ನು ಬೆಳಸಿದರು. ಕಾಶಿಯ ಸೆಂಟ್ರಲ್ ಹಿಂದೂ ಕಾಲೇಜನ್ನು ಸ್ಥಾಪಿಸಿದಮೇಲೆ, ಅದರ ಧ್ಯೇಯಗಳನ್ನು ಸಾಧನೆಗಳನ್ನು ಪ್ರಚುರಗೊಳಿಸುವ ಉದ್ದೇಶದಿಂದ ಸೆಂಟ್ರಲ್ ಹಿಂದೂ ಕಾಲೇಜ್ ಮ್ಯಾಗ್‌ಜೈನ್ ಎಂಬ ಮಾಸಪತ್ರಿಕೆಯನ್ನು ಸ್ಥಾಪಿಸಿದಂತೆ ಸ್ಕೌಟ್ ಚಳವಳಿಯನ್ನು ಆರಂಭಿಸಿದಮೇಲೆ, "ದಿ ಇಂಡಿಯನ್ ಸ್ಕೌಟ್" ಎಂಬ ಮಾಸಪತ್ರಿಕೆಯ ಪ್ರಕಟಣೆಯನ್ನು ಪ್ರಚೋದಿಸಿದರು. ಆರಂಭವಾದ ಕೆಲವು ತಿಂಗಳುಗಳಲ್ಲಿಯೇ, ಕಾಲೇಜ್ ಪತ್ರಿಕೆಯಂತೆ ಈ ಪತ್ರಿಕೆಯೂ ಜನಪ್ರಿಯವಾಯಿತು.

ನಾಲ್ಕು ವರ್ಷಗಳು ಸ್ವತಂತ್ರವಾಗಿ ಬೆಳೆದ ಈ ಸ್ಕೌಟ್ ಚಳವಳಿಯ ಬೆಳವಣಿಗೆಯನ್ನು ಕಂಡ ಬೇಡನ್ ಪೊವೆಲ್ ಸಂಸ್ಥೆಯವರು, ತಾವಾಗಿ ತಮ್ಮ ಪೀಠದಿಂದಿಳಿದು ಬಂದು ಭಾರತೀಯ ಸ್ಕೌಟ್ ಚಳವಳಿಯನ್ನು ಅಂಗೀಕರಿಸಿದರು.

ತರುಣ ತರುಣಿಯರ ಅಭಿವೃದ್ಧಿಗಾಗಿ, ಅವರನ್ನು ಉತ್ತಮ ಪ್ರಜೆಗಳನ್ನಾಗಿ ಮಾಡುವುದಕ್ಕಾಗಿ ಆನಿ ಬೆಸೆಂಟರು ನಾನಾಮುಖವಾಗಿ ಶ್ರಮಿಸಿದರು. ತರುಣ ಭಾರತ ಸಂಘವನ್ನು (ಯಂಗ್‌ಮೆನ್ಸ್ [ಮತ್ತು ವುಮೆನ್ಸ್] ಇಂಡಿಯನ್ ಅಸೋಸಿಯೇಷನ್) ಸ್ಥಾಪಿಸಿ, ಈ ಸಂಘಕ್ಕಾಗಿಯೂ, ಸಾರ್ವಜನಿಕ ಕಾರ್ಯ ಕಲಾಪಗಳ ಉಪಯೋಗಕ್ಕಾಗಿಯೂ ಮದರಾಸಿನಲ್ಲಿ 'ಗೋಖಲೆ ಹಾಲ್' ಎಂಬ ಹೆಸರಿನಲ್ಲಿ ಒಂದು ದೊಡ್ಡ ಕಟ್ಟಡವನ್ನೇ ಕಟ್ಟಿಸಿಕೊಟ್ಟರು. ಪ್ರಜಾ ಪ್ರಭುತ್ವದ ತತ್ವಗಳನ್ನೂ, ಆ ತತ್ವಗಳನ್ನು ಕಾರ್ಯತಃ ಆಚರಣೆಗೆ ತರುವ ವಿಧಾನವನ್ನೂ ತರುಣರಿಗೆ ಮುಂದಟ್ಟುಮಾಡುವ ಉದ್ದೇಶದಿಂದ "ಮದ್ರಾಸ್ ಪಾರ್ಲಿಮೆಂಟ್", "ಪೊಲಿಟಿಕಲ್ ಕ್ಲಬ್" ಮುಂತಾದ ಸಂಸ್ಥೆಗಳನ್ನು ಸ್ಥಾಪಿಸಿದರು. ಈ ಸಂಸ್ಥೆಗಳ ಮೂಲಕ, ಶಾಸನ ರಚನೆ, ಅವುಗಳನ್ನು ಕುರಿತು ಚರ್ಚೆನಡೆಯಿಸುವ ಕ್ರಮ ಮುಂತಾದ ರಾಜಕೀಯ ವ್ಯವಹಾರ ನೀತಿಗಳ ಬಗೆಗೆ ತರುಣರಿಗೆ ಶಿಕ್ಷಣ ದೊರೆಯುವಂತೆ ಮಾಡಿದರು. ತರುಣರು ಉತ್ತಮ ಧ್ಯೇಯಗಳಿಂದ ಪ್ರೇರೇಪಿತರಾಗುವಂತೆ ಮಾಡಲು, ಕೆಲವು ವರ್ಷಗಳ ಪರಿಯಂತ "ದಿ ಯಂಗ್ ಸಿಟಿಜನ್" ಎಂಬ ಪತ್ರಿಕೆಯನ್ನು ಪ್ರಕಟಿಸಿದರು.

ಈ ರೀತಿ ಆದಷ್ಟು ಹೆಚ್ಚು ಜನರಿಗೆ ಪ್ರಜಾಪ್ರಭುತ್ವದ ತತ್ವ ಮತ್ತು ಕಾರ್ಯಾಚರಣೆಯ ವಿಧಾನ ತಿಳಿಯಬೇಕೆಂಬುದು ಆನಿ ಬೆಸೆಂಟ್‌ರವರ ಆಶಯವಾಗಿದ್ದು, ಅದಕ್ಕಾಗಿ ಅವರು ಶ್ರಮಿಸಿದರೂ, ವಿದ್ಯಾರ್ಥಿಗಳು ರಾಷ್ಟ್ರದ ರಾಜಕೀಯ ವ್ಯವಹಾರದಲ್ಲಿ ಭಾಗವಹಿಸುವುದನ್ನು ಅವರು ತೀವ್ರವಾಗಿ ನಿರೋಧಿಸುತ್ತಿದ್ದರು. ಲಾರ್ಡ್ ಕರ್ಜನರ ಕಾಲದಲ್ಲಿ ಬಂಗಾಳದ ವಿಭಜನೆ ನಡೆದಾಗ, ದೇಶದ ಎಲ್ಲ ಭಾಗಗಳಲ್ಲೂ ಆ ವಿಭಜನೆಗೆ ವಿರೋಧವನ್ನು ಪ್ರದರ್ಶಿಸಲಾಯಿತು. ಆಗ ಆನಿ ಬೆಸೆಂಟರು ಸೆಂಟ್ರಲ್ ಹಿಂದೂ ಕಾಲೇಜಿನ ವಿದ್ಯಾರ್ಥಿಗಳು ಆ ರಾಜಕೀಯ ಚಳವಳಿಯಲ್ಲಿ ಭಾಗವಹಿಸಕೂಡದೆಂದು ಒತ್ತಾಯದ ಆಜ್ಞೆ ಮಾಡಿದರು. ಅದೇ ರೀತಿ ೧೯೨೦-೨೧ರಲ್ಲಿ ಗಾಂಧೀಜಿಯವರು ಅಸಹಕಾರ ಚಳವಳಿಯನ್ನಾರಂಭಿಸಿದಾಗ ಕೂಡ ವಿದ್ಯಾರ್ಥಿಗಳು ಆ ಚಳವಳಿಯಲ್ಲಿ ಭಾಗವಹಿಸಕೂಡದೆಂದು ತಮ್ಮ ಖಚಿತಾಭಿಪ್ರಾಯವನ್ನು ವ್ಯಕ್ತಪಡಿಸಿದರು. ಅವರ ಈ ಅಭಿಪ್ರಾಯ ಕಟುವಾದ ಟೀಕೆಗೊಳಗಾಯಿತು. ಈಗ ಕೂಡ ಆನಿ ಬೆಸೆಂಟರ ಈ ಅಭಿಪ್ರಾಯ ಸರಿಯಲ್ಲವೆನ್ನುವವರು ಇದ್ದಾರೆ. ಅಂಥವರಲ್ಲಿ ಬಹುಮಂದಿ ಅವರ ಅಭಿಪ್ರಾಯವನ್ನು ಸ್ಪಷ್ಟವಾಗಿ ಅರ್ಥಮಾಡಿಕೊಂಡಿಲ್ಲವೆಂದರೆ ತಪ್ಪಲ್ಲ. ಆದ್ದರಿಂದ ಬೆಸೆಂಟರ ಅಭಿಪ್ರಾಯವೇನೆಂಬುದನ್ನು ವಿವರಿಸುವುದು ಅಗತ್ಯ.

ಆನಿ ಬೆಸೆಂಟರು ಹೇಳಿದ್ದು-**ವಿದ್ಯಾರ್ಥಿಗಳು ರಾಜಕೀಯದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಬಾರದು** ಎಂದು. ಅದರಲ್ಲಿ ಅವರಿಗೆ ಆಸಕ್ತಿಯಿರಕೂಡದು ಎಂದು ಅವರು ಹೇಳಲಿಲ್ಲ.

ವಿದ್ಯಾರ್ಥಿಗಳನ್ನು ಉತ್ತಮ ಪ್ರಜೆಗಳನ್ನಾಗಿ ಸಿದ್ಧಗೊಳಿಸುವುದು ವಿದ್ಯಾಭ್ಯಾಸದ ಗುರಿ. ಅವರು ಈ ಶಿಕ್ಷಣ ಪಡೆಯುತ್ತಿರುವಾಗ ಅವರನ್ನು ಆ ಅಸಿದ್ಧಸ್ಥಿತಿಯಲ್ಲಿ ರಾಜಕೀಯ ಸಮರಾಂಗಣಕ್ಕೆ ಎಸೆಯುವುದು ಸರಿಯಲ್ಲ. ಅದರಿಂದ ಅವರಿಗೆ ಕೇಡಲ್ಲದೆ ಒಳ್ಳೆಯದಾಗುವುದಿಲ್ಲ. ಅಂಥ ಅಸಿದ್ಧ ರಾಜಕೀಯ ಯೋಧಬಲದಿಂದ ರಾಜಕೀಯ ಹೋರಾಟಗಳನ್ನು ಗೆಲ್ಲುವ ಸಂಭವವೂ ಇಲ್ಲ ಎಂಬುದು ಅವರ ಅಭಿಪ್ರಾಯವಾಗಿತ್ತು. **ರಾಜಕೀಯ ಹೋರಾಟ ಹುಡುಗರ ಕರ್ತವ್ಯವಲ್ಲ ಹಿರಿಯ ಹೊಣೆಗಾರಿಕೆ ಎಂದು ಅವರು ಸ್ಪಷ್ಟಪಡಿಸಿದ್ದರು.**

ಆದರೆ, ವಿದ್ಯಾರ್ಥಿಗಳಿಗೆ ರಾಜಕೀಯದ ಗಂಧಕೂಡ ತಾಗಬಾರದೆಂದು ಅವರು ಎಂದೂ ಹೇಳಲಿಲ್ಲ. ಜ್ಞಾನಾರ್ಜನೆ ವಿದ್ಯಾರ್ಥಿಗಳ ಕರ್ತವ್ಯ. ಆದ್ದರಿಂದ ರಾಜಕೀಯಕ್ಕೆ ಸಂಬಂಧಿಸಿದ ವಿಚಾರಗಳನ್ನು ಕೂಡ ಅವರು ಆಸಕ್ತಿಯಿಂದ ಅಧ್ಯಯನ ಮಾಡಬೇಕು. ವಿದ್ಯಾರ್ಥಿದೆಸೆ ಈ ಅಧ್ಯಯನದ ಕಾಲ. ವಿದ್ಯಾರ್ಥಿಗಳು ಅಧ್ಯಯನ ಮುಗಿಸಿ ಜೀವನ ರಂಗಕ್ಕಿಳಿದ ಮೇಲೆ ತಾವು ಅಧ್ಯಯನದಿಂದ ಮೈಗೂಡಿಸಿಕೊಂಡಿದ್ದನ್ನು ಕಾರ್ಯರಂಗದಲ್ಲಿ ಆಚರಣೆಗೆ ತರಲು ಪ್ರಯತ್ನಿಸಬಹುದು. ಆದರೆ ವಿದ್ಯಾರ್ಥಿಯಾಗಿದ್ದಾಗಲೇ ಅಂಥ ಕಾರ್ಯಾಚರಣೆಗೆ ಇಳಿಯಬಾರದು ಎಂಬುದು ಆನಿ ಬೆಸೆಂಟರ ಅಭಿಪ್ರಾಯವಾಗಿತ್ತು. ಹಾಗೆ ಇಳಿಯುವುದರಿಂದ ವಿದ್ಯಾರ್ಥಿಗಳ ಜ್ಞಾನಾರ್ಜನೆಗೆ ಅಡಚಣೆಯೂ ಅವರ ಹಿತಕ್ಕೆ ಧಕ್ಕೆಯೂ ಉಂಟಾಗುತ್ತದೆ ಎಂದು ಅವರು ನಂಬಿದ್ದರು. ವಿದ್ಯಾರ್ಥಿಗಳು ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಚೆನ್ನಾಗಿ ಅಧ್ಯಯನ ಮಾಡಲು ಸಹಾಯಕವಾಗಲೆಂಬ ಉದ್ದೇಶದಿಂದ, ಪ್ರತಿಯೊಂದು ಶಾಲೆ, ಕಾಲೇಜಿನಲ್ಲಿಯೂ 'ಪಾರ್ಲಿಮೆಂಟ್'ಗಳನ್ನು ಸ್ಥಾಪಿಸಬೇಕೆಂಬುದು ಅವರ ಆಶಯವಾಗಿತ್ತು. ಇಂಥ 'ಪಾರ್ಲಿಮೆಂಟ್'ನ ಕಾರ್ಯಕಲಾಪಗಳಲ್ಲಿ ಭಾಗವಹಿಸುವುದರಿಂದ, ವಿದ್ಯಾರ್ಥಿಗಳು ತಮ್ಮ ಅಭಿಪ್ರಾಯಗಳನ್ನು ಪರಿಣಾಮಕಾರಿಯಾಗಿ ನಿರೂಪಿಸುವ, ವಿರೋಧ ಪಕ್ಷದ ಅಭಿಪ್ರಾಯಗಳನ್ನು ಅರ್ಥಮಾಡಿಕೊಂಡು ವಿವೇಚಿಸುವ, ಅಭಿಪ್ರಾಯ ಭೇದವಿದ್ದೆಡೆಯಲ್ಲಿ ಕೂಡ ವಿನಯ ಗಾಂಭೀರ್ಯಗಳಿಂದ ವರ್ತಿಸುವ ಕಲೆ ಅವರಿಗೆ ಲಭಿಸುತ್ತದೆಯೆಂದೂ, ಪ್ರಜಾಪ್ರಭುತ್ವದಲ್ಲಿ ಈ ಕಲೆ ಅಮೌಲ್ಯವಾದದ್ದೆಂದೂ ಆನಿ ಬೆಸೆಂಟ್‌ರವರ ಅಭಿಪ್ರಾಯವಾಗಿತ್ತು. ಈ ಅಭಿಪ್ರಾಯ ಎಷ್ಟು ಸಾಧುವಾದದ್ದು, ಅನುಸರಣೀಯವಾದದ್ದು ಎಂಬುದನ್ನು ನಾವು ಈಗ ಅನುಭವದಿಂದ ಚೆನ್ನಾಗಿ ಮನಗಂಡಿದ್ದೇವೆ.

ಭಾರತೀಯ ತರುಣ ತರುಣಿಯರನ್ನು ದೇಶಾಭಿಮಾನಿಗಳನ್ನಾಗಿಯೂ, ಧೀರರಾದ ಸತ್ಪ್ರಜೆಗಳನ್ನಾಗಿಯೂ ಮಾಡಲು ಆನಿ ಬೆಸೆಂಟರು ಸಲ್ಲಿಸಿದ ಸೇವೆ ಅಮೌಲ್ಯವಾದದ್ದು. ಅವರು ಈ ಬಗೆಗೆ ಬೋಧಿಸಿದ ತತ್ವಗಳು ಇಂದು ನಮಗೆ ಸರ್ವಸಾಮಾನ್ಯವಾಗಿ ಕಾಣಬಹುದು; ಅವರು ಆಚರಣೆಗೆ ತಂದ ಅನೇಕ ಪದ್ಧತಿಗಳಲ್ಲಿ ಈಗ ವೈಶಿಷ್ಟ್ಯವೇನೂ ಕಾಣದೆ ಇರಬಹುದು. ಆದರೆ, ಅವರು

ಆ ತತ್ವಗಳನ್ನು ಪ್ರತಿಪಾದಿಸಿದ ಕಾಲದಲ್ಲಿ ನಮ್ಮ ದೇಶದ ಸ್ಥಿತಿ ಹೇಗಿದ್ದಿತೆಂಬು ದನ್ನೂ, ಅವರು ಆಚರಣೆಗೆ ತಂದ ಹಲವಾರು ಪದ್ಧತಿಗಳು ಈಗ ನಮಗೆ ತೀರಾ ಒಗ್ಗಿ ಹೋಗಿದೆಯೆಂಬುದನ್ನೂ ಗಮನಿಸಿದರೆ ಆಗ ಆನಿ ಬೆಸೆಂಟರ ದೂರದೃಷ್ಟಿ ಮತ್ತು ಧೀರ ಸುಧಾರಣಾ ಶಕ್ತಿಯ ಹಿರಿಮೆ ನಮಗೆ ಅರ್ಥವಾಗುತ್ತದೆ.

ಯಾವ ರಾಜ್ಯದಲ್ಲಿ, ಆ ರಾಷ್ಟ್ರದ ಅತ್ಯಂತ ಬುದ್ಧಿವಂತರಾದ ಜನರು ಜನಹಿತದೃಷ್ಟಿಯಿಂದ ರಾಜ್ಯಭಾರ ನಡೆಸುತ್ತಾರೋ ಅಂಥ ರಾಜ್ಯಾಡಳಿತ ನಮ್ಮ ಆದರ್ಶವಾಗಿರಬೇಕು ಎಂದು ಆನಿ ಬೆಸೆಂಟರು ಭಾವಿಸಿದ್ದರು. ಈ ಭಾವನೆಯನ್ನು ಕಾರ್ಯರೂಪಕ್ಕೆ ತರುವ ಉದ್ದೇಶವನ್ನು ಅವರು ತಮ್ಮ ಮನಸ್ಸಿನಲ್ಲಿಟ್ಟುಕೊಂಡು ನಮ್ಮ ನಾಡಿನ ತರುಣರಲ್ಲಿ ಜ್ಞಾನಾಕಾಂಕ್ಷೆಯನ್ನೂ ಸೇವಾಬುದ್ಧಿಯನ್ನೂ ಬೆಳೆಸಲು ಪ್ರಯತ್ನಿಸಿದರು. ಅವರು ಸ್ಥಾಪಿಸಿದ ವಿದ್ಯಾ ಪದ್ಧತಿ ಮತ್ತು ಯುವಜನ ಸಂಸ್ಥೆಗಳ ಆದರ್ಶಕೂಡ ಈ ಸದುದ್ದೇಶದಿಂದಲೇ ಪ್ರೇರೇಪಿತವಾಗಿತ್ತು.

ಹಿಂದೂಧರ್ಮದ ವಿಚಾರವಾಗಿ ಆನಿ ಬೆಸೆಂಟ್‌ರವರಿಗೆ ಅಪಾರ ಅಭಿಮಾನವಿದ್ದಿತಾದರೂ, ಆ ಧರ್ಮದ ಮೂಲತತ್ವಗಳಿಗೆ ವಿರೋಧವಾಗಿ ಹಿಂದೂಗಳಲ್ಲಿ ಬೆಳೆದು ಬಂದಿದ್ದ ಪದ್ಧತಿಗಳನ್ನು ಅವರು ಧೈರ್ಯವಾಗಿ ನಿರೋಧಿಸಿದ್ದಲ್ಲದೆ, ಅವನ್ನು ಆಚರಣೆಯಿಂದ ತಪ್ಪಿಸಲು ಕೂಡ ಅವರು ಪ್ರಯತ್ನಿಸಿದರು.

ಅವರ ಇಂಥ ಪ್ರಯತ್ನಗಳಲ್ಲಿ ಅಸ್ಪೃಶ್ಯತಾ ನಿವಾರಣೆ ಒಂದು. ವಿಶ್ವಭ್ರಾತೃತ್ವವನ್ನು ಬೋಧಿಸುವ, ಮಾನವೇತರ ಪ್ರಾಣಿಗಳೊಡನೆ ಕೂಡ ಸ್ನೇಹದಿಂದ ವರ್ತಿಸಬೇಕೆಂದು ಬೋಧಿಸುವ ಹಿಂದೂಧರ್ಮದಲ್ಲಿ ಅಸ್ಪೃಶ್ಯತೆಗೆ ಸ್ಥಾನವೇ ಇಲ್ಲವೆಂಬುದು ಅವರ ಖಚಿತಾಭಿಪ್ರಾಯವಾಗಿತ್ತು. ಆದ್ದರಿಂದ ಅವರು ತಮ್ಮ ವ್ಯವಹಾರದಲ್ಲಿ ಅಸ್ಪೃಶ್ಯತೆಗೆ ಎಡೆಗೊಟ್ಟಿರಲಿಲ್ಲ. ತಮ್ಮ ಅನುಯಾಯಿಗಳು ಕೂಡ ಈ ವಿಚಾರದಲ್ಲಿ ತಮ್ಮ ಮಾರ್ಗದರ್ಶನದಂತೆ ನಡೆಯಬೇಕೆಂಬುದು ಅವರ ಉದ್ದೇಶವಾಗಿತ್ತು.

ಅವರು ತಮ್ಮ ಅಡ್ಯಾರ್ ಕೇಂದ್ರದಲ್ಲಿ ಕೆಲಸ ಮಾಡಲು ಅನೇಕ ಮಂದಿ ಅಸ್ಪೃಶ್ಯರನ್ನು ನಿಯಮಿಸಿಕೊಂಡಿದ್ದರು. ಕಷ್ಟಪಟ್ಟು ಕೆಲಸಮಾಡಿ ಹೊಟ್ಟೆ ಹೊರೆದುಕೊಳ್ಳುವ, ಉತ್ತಮ ವರ್ಗದ ಹಿಂದೂಗಳು ತಮ್ಮನ್ನು ಕಡೆಗಣಿಸಿದರೂ ಹಿಂದೂಧರ್ಮದಲ್ಲಿ ಶ್ರದ್ಧೆಯನ್ನಿಟ್ಟುಕೊಂಡಿದ್ದ ಅಸ್ಪೃಶ್ಯವರ್ಗದ ವಿಚಾರವಾಗಿ ಆನಿ ಬೆಸೆಂಟರಿಗೆ ಗೌರವವಿತ್ತು. ಯಾರೇ ಆಗಲಿ ಅವರನ್ನು 'ಪರಯ' 'ಹೊಲೆಯ' ಮುಂತಾದ ಕೀಳು ಭಾವನೆಯ ಹೆಸರುಗಳಿಂದ ಕರೆಯುವುದನ್ನಾಗಲೀ, ಅವರಿಗೆ ಅವಮಾನವಾಗುವ ರೀತಿಯಲ್ಲಿ ನಡೆಯುವುದನ್ನಾಗಲೀ ಆನಿ ಬೆಸೆಂಟರು ಸಹಿಸುತ್ತಿರಲಿಲ್ಲ. ಅಸ್ಪೃಶ್ಯರನ್ನು ಕೀಳು ಹೆಸರುಗಳಿಂದ ಕರೆಯದೆ 'ಪಂಚಮ' ರೆಂದು ಕರೆಯಬೇಕೆಂದು ಸೂಚಿಸಿ ಆ ಮಾತನ್ನು ಆಚರಣೆಗೆ ತಂದವರು ಆನಿ ಬೆಸೆಂಟರೆಂದು ತಿಳಿದವರು ಹೇಳುತ್ತಾರೆ.

'ಪಂಚಮ' ಕೆಲಸಗಾರರೊಂದಿಗೆ ಗೌರವದಿಂದ ವರ್ತಿಸದವರನ್ನು ಹೇಗೆ ನಯವಾಗಿ ಆದರೆ ಪರಿಣಾಮಕಾರಿಯಾಗಿ ತಿದ್ದುತ್ತಿದ್ದರೆಂಬುದನ್ನು

ಈ ಸಂದರ್ಭದಲ್ಲಿ ಸೂಚಿಸಬಹುದು :

ಅನೇಕಮಂದಿ ಪಂಚಮರು ಅಡ್ಯಾರ್ ತೋಟದಲ್ಲಿ ಕೆಲಸ ಮಾಡು ತ್ತಿದ್ದರೆಂದು ಹೇಳಿತಲ್ಲ. ತೋಟದ ಕೆಲಸಗಾರರಿಗೆ ಸಂಬಳ ಕೊಡುವ ಗುಮಾಸ್ತೆ, ಪಂಚಮರಲ್ಲದವರಿಗೆ, ಸಂಬಳದ ದುಡ್ಡನ್ನು ನೇರವಾಗಿ ಅವರವರ ಕೈಗೆ ಕೊಡುತ್ತಿದ್ದು, ಪಂಚಮ ಕೆಲಸಗಾರರಿಗೆ ಹಾಗೆ ಮಾಡದೆ, ಅವರ ಸಂಬಳದ ಹಣವನ್ನು ದೂರದಲ್ಲಿ ನೆಲದಮೇಲೆ ಎಸೆಯುವ ಪದ್ಧತಿ ಯನ್ನಿಟ್ಟಿದ್ದನು. ಹೀಗೆ ನೆಲದಮೇಲೆ ಬಿದ್ದು ಚದರಿದ ಕಾಸುಗಳನ್ನು ಅವರು ಸಾವಧಾನವಾಗಿ ಆರಿಸಿಕೊಳ್ಳಬೇಕಾಗಿತ್ತು !

ಈ ಪದ್ಧತಿಯ ವಿಚಾರ ಆನಿ ಬೆಸೆಂಟರಿಗೆ ತಿಳಿದಮೇಲೆ, ಮಾರನೆಯ ಸಂಬಳದ ದಿನ ಅವರೇ ಸಂಬಳ ಕೊಡಲು ಕುಳಿತರು. ಗುಮಾಸ್ತೆ ಲೆಕ್ಕಹಾಕಿ ಹೇಳಿದಷ್ಟು ಹಣವನ್ನು ಎಣಿಸಿ ಕಾಗದದಲ್ಲಿ ಅಚ್ಚುಗಟ್ಟಾಗಿ ಸುತ್ತಿ ಪಂಚಮರೂ ಸೇರಿ ಪ್ರತಿಯೊಬ್ಬ ಕೆಲಸಗಾರನ ಕೈಗೂ ತಾವೇ ಕೊಟ್ಟರು. ಅಷ್ಟೇಯೆ. ಗುಮಾಸ್ತನೊಡನೆ ಇನ್ನೇನು ಮಾತಾಡಲಿಲ್ಲ.

ಆನಿ ಬೆಸೆಂಟರ ಈ ನಡವಳಿಕೆ ಅಸ್ಪೃಶ್ಯತೆಯ ಭಾವನೆಯಿಂದ ಪೀಡಿತನಾಗಿದ್ದ ಆ ಗುಮಾಸ್ತೆಯ ಕಣ್ಣು ತೆರೆಯಿತು. ತನ್ನ ತಪ್ಪನ್ನರಿತು ಅಂದಿನಿಂದ ಅದನ್ನು ತಿದ್ದಿಕೊಂಡನು.

ಅಸ್ಪೃಶ್ಯತಾ ನಿವಾರಣೆಯಾಗಬೇಕಾದರೆ, ಅಸ್ಪೃಶ್ಯರ ಆರ್ಥಿಕ ಸ್ಥಿತಿ ಉತ್ತಮಗೊಳ್ಳಬೇಕು ಮತ್ತು ಅವರ ಮಕ್ಕಳಿಗೆ ವಿದ್ಯಾಭ್ಯಾಸದ ಸೌಲಭ್ಯ ದೊರೆಯಬೇಕು ಎಂಬುದು ಆನಿ ಬೆಸೆಂಟರ ಅಭಿಪ್ರಾಯವಾಗಿತ್ತು. ಈ ಮಾರ್ಗಗಳಿಂದಲೂ ಸಮಾಜ ಸುಧಾರಕರ ಪ್ರಯತ್ನದಿಂದಲೂ, ಅಸ್ಪೃಶ್ಯತೆ ತೊಲಗಿ, ಅಸ್ಪೃಶ್ಯರು ಹಿಂದೂಸಮಾಜದಲ್ಲಿ ಗಣ್ಯರಾಗಿ ಉಳಿಯ ಬೇಕೆಂಬುದು ಅವರ ಆಶಯವಾಗಿತ್ತು. ಈ ಉದ್ದೇಶ ಸಾಧನೆಗಾಗಿ ಅವರು, ಅಸ್ಪೃಶ್ಯರ ಮಕ್ಕಳಿಗಾಗಿ ಪಾಠಶಾಲೆಗಳನ್ನು ತೆರೆದರು. ಅವರಿಗೆ ತಮ್ಮಿಂದಾದ ಸಹಾಯಗಳೆಲ್ಲವನ್ನೂ ಮಾಡಿದರು.

ಅವರು ಆರಂಭಿಸಿದ ಈ ಪ್ರಯತ್ನವನ್ನು ಗಾಂಧೀಜೀಯವರು ಮುಂದು ವರಿಸಿದರು. ಅಸ್ಪೃಶ್ಯರನ್ನು 'ಹರಿಜನ' ರೆಂದು ಕರೆದು ಅವರ ಉದ್ಧಾರ ಕ್ಕಾಗಿ ದೊಡ್ಡ ಚಳವಳಿಯನ್ನೇ ಹೂಡಿದರು. ಇತ್ತೀಚೆಗೆ ಅಸ್ಪೃಶ್ಯತೆಯ

ಆಚರಣೆಯನ್ನು ಶಿಕ್ಷಾರ್ಹವನ್ನಾಗಿ ಮಾಡಿರುವ ಶಾಸನ ಆಚರಣೆಗೆ ಬಂದಿದೆ. ಹರಿಜನರ ಸ್ಥಿತಿಗತಿಗಳು ಉತ್ತಮಗೊಳ್ಳುತ್ತಿವೆ. ಅಸ್ಪೃಶ್ಯತೆ ಕ್ರಮಕ್ರಮ ವಾಗಿ ಅಳಿದುಹೋಗುತ್ತಿದೆ.

ಆನಿ ಬೆಸೆಂಟರವರು ಅಸ್ಪೃಶ್ಯತೆಯ ನಿವಾರಣೆಗಾಗಿ ಪ್ರಯತ್ನಪಟ್ಟಂತೆ, ಹಿಂದೂಗಳಲ್ಲಿದ್ದ ಒಳ ಜಾತಿಗಳ ಏರು ಪೇರುಗಳನ್ನು ಸಮಗೊಳಿಸಲು ಕೂಡ ಪ್ರಯತ್ನಿಸಿದರು. ಅವರ ನಾಯಕತ್ವದಲ್ಲಿ ಇಂಡಿಯಾದೇಶದ ಆದ್ಯಂತ ಹಬ್ಬಿದ ಬ್ರಹ್ಮಜ್ಞಾನ ಸಮಾಜದ ಸದಸ್ಯರು ಜಾತಿಯ ಕೀಳು ಮೇಲು ಗಳನ್ನು ಗಣನೆಗೆ ತಾರದೆ, ಅವನ್ನತಿಕ್ರಮಿಸಿದರು. ಇದೇರೀತಿ ಈ ಸಮಾಜದ ಸದಸ್ಯರು ಬಾಲ್ಯವಿವಾಹವನ್ನು ವಿರೋಧಿಸಿ, ಆ ಪದ್ಧತಿಯನ್ನು ಬಿಟ್ಟು ಬಿಡಲು ಜನಮನ ಒಗ್ಗಿಕೊಳ್ಳುವಂತೆ ಮಾಡಿದರು.

ಇಂಥ ಸಮಾಜ ಸುಧಾರಣೆಯ ವಿಚಾರದಲ್ಲಿ ಒತ್ತಾಯಕ್ಕಿಂತ ಬುದ್ಧಿ ಪೂರ್ವಕವಾದ ಬದಲಾವಣೆಯೇ ಹೆಚ್ಚು ಪರಿಣಾಮಕಾರಿ, ಹೆಚ್ಚು ಸ್ಥಿರವೆಂದು ಅನುಭವದಿಂದ ಅರಿತುಕೊಂಡಿದ್ದ ಆನಿ ಬೆಸೆಂಟ್‌ರು ಈ ಕಾರ್ಯ ಸಾಧನೆಯಲ್ಲಿ ಒತ್ತಾಯಕ್ಕಿಂತ ಪ್ರಚಾರಕ್ಕೆ ಹಚ್ಚು ಮಾನ್ಯತೆ ಕೊಟ್ಟರು. ವಿರುದ್ಧ ಶಕ್ತಿ ಗಳ ನಡುವೆ ಘರ್ಷಣೆಯನ್ನು ಬಲವಡಿಸುವುದಕ್ಕಿಂತ ಸೌಹಾರ್ದವನ್ನು ಬೆಳೆ ಸುವುದು, ಸಮನ್ವಯವನ್ನು ಸಾಧಿಸುವುದು ಹೆಚ್ಚು ಹಿತಕರ, ಲಾಭದಾಯಕ ಕಾರ್ಯಸಾಧಕವೆಂದು ಅವರು ನಂಬಿದ್ದರು. ಅಂದಮಾತ್ರಕ್ಕೆ ಅವರು ಹೋರಾಡಲು ಹೆದರುತ್ತಿದ್ದರೆಂದಾಗಲೀ, ಅನ್ಯಾಯಕ್ಕೆ ತಲೆ ಬಾಗುತ್ತಿದ್ದ ರೆಂದಾಗಲೀ, ಬೆದರಿಕೆಗೆ ಅಂಜುತ್ತಿದ್ದರೆಂದಾಗಲೀ ಅಲ್ಲ. ತಮಗೆ ನ್ಯಾಯ ವೆಂದು ತೋರಿದ್ದನ್ನು ಕೊನೆಯವರೆಗೂ ಸಾಧಿಸುತ್ತಿದ್ದರು. ಆ ಪ್ರಯತ್ನ ದಲ್ಲಿ ಅವರು ಲಾಭನಷ್ಟಗಳನ್ನು ಲಕ್ಷ್ಯಿಸುತ್ತಲೂ ಇರಲಿಲ್ಲ. ಹಿಂದಕ್ಕೆ ಹೆಜ್ಜೆ ಹಾಕುತ್ತಲೂ ಇರಲಿಲ್ಲ. ಆದರೆ ತಮ್ಮ ನಡವಳಿಕೆಯಿಂದಾಗಿ ದ್ವೇಷ, ವಿಷಮತೆಗಳು ಈ ಹೋರಾಟದಲ್ಲಿ ಬೆರೆಯದಂತೆ ಎಚ್ಚರಿಕೆಯಿಂದಿರು ತ್ತಿದ್ದರು. ವಿರೋಧಾಭಿಪ್ರಾಯಗಳನ್ನುಳ್ಳವರನ್ನೂ ಪ್ರೀತಿಸಬೇಕು; ಏಕೆಂದರೆ ಪ್ರೀತಿ ಬಾಳಿನ ಬಗೆ; ದ್ವೇಷ ನಾಶದ ಹಾದಿ ಎಂದು ಅವರು ನಂಬಿದ್ದರು.

೧೭

ಆನಿ ಬೆಸೆಂಟ್‌ರವರು ಇಂಡಿಯಾಕ್ಕೆ ಬಂದಮೇಲೆ ಸುಮಾರು ಇಪ್ಪತ್ತು ವರ್ಷಗಳವರೆಗೆ ಇಲ್ಲಿನ ರಾಜಕೀಯ ಹೋರಾಟದಲ್ಲಿ ಕೈಹಾಕಿರಲಿಲ್ಲ. ಆ ಕಾಲವನ್ನು ಅವರು ಭಾರತೀಯ ಧರ್ಮ, ಸಂಸ್ಕೃತಿಗಳ ಪುನರುಜ್ಜೀವನಕ್ಕೆ ಹಿಂದೂ ಸಮಾಜ ಸಂಸ್ಕರಣಕ್ಕೆ, ವಿದ್ಯಾಪ್ರಸಾರಕ್ಕೆ ಮೀಸಲು ಮಾಡಿ ದುಡಿದರು.

ಆನಿ ಬೆಸೆಂಟ್‌ರು ಮೇಡಂ ಬ್ಲವಾಟ್‌ಸ್ಕಿಯವರ ಪ್ರಭಾವಕ್ಕೊಳಗಾಗುವ ವರೆಗೂ ಅವರು ರಾಜಕೀಯದಲ್ಲಿ ತೀವ್ರವಾದ ಆಸಕ್ತಿಯುಳ್ಳವರಾಗಿದ್ದರು. ಆದರೆ ಬ್ರಹ್ಮಜ್ಞಾನ ಸಮಾಜವನ್ನು ಸೇರಿದ ಮೇಲೆ ರಾಜಕೀಯ ಚಳವಳಿಗಳಿಂದ ದೂರವಾಗಿದ್ದರು. ಆದ್ದರಿಂದ, ಅವರು ರಾಜಕೀಯ ರಂಗದಿಂದ ಪೂರ್ಣವಾಗಿ ವಿರಮಿಸಿದ್ದಾರೆಂಬ ಭಾವನೆ ಅನೇಕರಲ್ಲಿ ಬೆಳೆದಿತ್ತು. ಆನಿ ಬೆಸೆಂಟ್‌ರು ಮತ್ತೆ ರಾಜಕೀಯ ರಂಗವನ್ನು ಪ್ರವೇಶಿಸಿದೊಡನೆ ಈ ಭಾವನೆಯನ್ನು ಬೆಳೆಸಿಕೊಂಡಿದ್ದವರಿಗೆ ಆಶ್ಚರ್ಯವಾಯಿತು. ಧಾರ್ಮಿಕ ಚಳವಳಿಯಲ್ಲಿ ತೊಡಗಿರುವ ಅವರು ರಾಜಕೀಯದಿಂದ ದೂರವಿರುವುದೇ ಉತ್ತಮವೆಂಬುದು ಇಂಥವರ ಅಭಿಪ್ರಾಯವಾಗಿತ್ತು. ಅವರು ತಮ್ಮ ಈ ಅಭಿಪ್ರಾಯವನ್ನು ಆನಿ ಬೆಸೆಂಟ್‌ರಿಗೆ ತಿಳಿಸಿದರೋ ಏನೋ? – ಅಂತು ಈ ಸಮಸ್ಯೆಯನ್ನೆತ್ತಿಕೊಂಡು ಅವರು ದೊಡ್ಡದೊಂದು ವಿವರಣೆಯನ್ನು ಬರೆದರು. ಆನಿ ಬೆಸೆಂಟ್‌ರು ಯಾವ ದೃಷ್ಟಿಯಿಂದ ಏಕೆ ಭಾರತ ರಾಜಕೀಯ ರಂಗವನ್ನು ಪ್ರವೇಶಿಸಿದರೆಂಬುದು ಆ ವಿವರಣೆಯಿಂದ ವ್ಯಕ್ತವಾಗುತ್ತದೆ.

"ಕಳೆದ ಕೆಲವು ವರ್ಷಗಳಿಂದ ನಾನು ಸಂಪೂರ್ಣವಾಗಿ ಕೈ ಬಿಟ್ಟಿದ್ದ ರಾಜಕೀಯ ರಂಗದ ಕೆಲಸಕ್ಕೆ ನಾನೇಕೆ ಮತ್ತೆ ಕೈ ಹಾಕಿದೆನೆಂದು ನನ್ನ ಮಿತ್ರರಲ್ಲಿ ಕೆಲವರು ಅಚ್ಚರಿಗೊಂಡಿದ್ದಾರೆ. ಇದಕ್ಕೆ ಉತ್ತರವಾಗಿ, ನನ್ನ ಆತ್ಮಚರಿತ್ರೆಯ ಕೊಂಚ ಭಾಗವನ್ನು ಇಲ್ಲಿ ಹೇಳಿಕೊಳ್ಳುವುದು ಅನಿವಾರ್ಯವಾಗುತ್ತದೆ. ಬ್ಲವಾಟ್‌ಸ್ಕಿಯವರು ನಾನು ರಾಜಕೀಯದಿಂದ ದೂರವಾಗಬೇಕೆಂದು ಆಜ್ಞೆಮಾಡಿದ್ದರಿಂದ ನಾನದನ್ನು

ತಾತ್ಕಾಲಿಕವಾಗಿ ಬಿಟ್ಟೆ. ನಾನು ಅಧ್ಯಾತ್ಮದ ವಿದ್ಯಾರ್ಥಿಯಾದಾಗ ವಿವಿಧ ವಿಚಾರಗಳಲ್ಲಿ ಬ್ರಹ್ಮಜ್ಞಾನದ ನಿಲುವು ಏನೆಂಬುದನ್ನು ಕಲಿತು, ಆ ನೂತನ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು, ನನ್ನ ಬುದ್ಧಿ, ಭಾವನೆಗಳನ್ನು ಆ ಹೊಸ ಬೆಳಕಿಗೆ ಸರಿಯಾಗಿ ಅಳವಡಿಸಿ ಕೊಳ್ಳಬೇಕಾಗಿತ್ತು. ಆದ್ದರಿಂದ ಬ್ಲವಾಟ್‌ಸ್ಕಿಯವರು ಹಾಗೆ ಆಜ್ಞೆ ಮಾಡಿದ್ದು ಸರಿಯಾದದ್ದೇ. ಅವರು ತಮ್ಮನ್ನು ಸಮತಾವಾದಿ ಯೆಂದು—ಅವರ ಸಮತಾವಾದ ದ್ವೇಷ ಪ್ರಚೋದಿತವಾದದ್ದಲ್ಲ. ಪ್ರೇಮದಿಂದ ಪ್ರೇರೇಪಿತವಾದದ್ದು – ಹೇಳಿಕೊಳ್ಳುತ್ತಿದ್ದರು. ಆದರೂ ಸಮತಾವಾದವನ್ನು ಪ್ರಚಾರಮಾಡಲು ನನಗೆ ಅವರು ಆಗ ಅವಕಾಶ ಕೊಡಲಿಲ್ಲ. ಮಾನವ ವರ್ಗ ಪ್ರಗತಿ ಪಥದಲ್ಲಿ ನಡೆಯುತ್ತಾ ಸಮತಾ ವಾದದ ವಿವಿಧ ಹಂತಗಳನ್ನು ಹೇಗೆ ಅನುಸಂಧಾನ ಮಾಡಿ, ಅತಿ ಕ್ರಮಿಸಿ ಮುಂಬರಿದು ಇಂದಿನ ಸ್ಥಿತಿಯನ್ನು ಮುಟ್ಟಿದೆಯೆಂಬುದನ್ನು ನಾನು ಸ್ಪಷ್ಟವಾಗಿ ಅರ್ಥ ಮಾಡಿಕೊಂಡ ಹೊರತು, ನಾನು ಸಮತಾ ವಾದವನ್ನು ಬೋಧಿಸಕೂಡದೆಂದು ಆಜ್ಞೆ ಮಾಡಿದ್ದರು. ನನಗೆ ಅತ್ಯಂತ ಪ್ರಿಯವಾದ ಮತ್ತು ಸಾರ್ವಜನಿಕ ಜೀವನದಲ್ಲಿ ನನ್ನ ಅಪ್ರತಿಮ ಸೇವೆಗೆ ಪಾತ್ರವಾಗಿದ್ದ ವಿಚಾರವಾಗಿ ನಾನು ಮೌನ ದಿಂದಿರಬೇಕೆಂದು ಅವರು ಅಪ್ಪಣೆ ಮಾಡಿದ್ದರು. ಅವರು ಒಳ್ಳೆಯು ದನ್ನೇ ಮಾಡಿದರು. ಸಂಸ್ಕಾರ ವಿಹೀನವಾಗಿದ್ದ ನನ್ನ ಅಭಿಪ್ರಾಯ ಗಳು ಮೌನಾಗ್ನಿಯಲ್ಲಿ ಬೆಂದು, ಕಾಳಿಕೆಯನ್ನು ಕಳೆದುಕೊಂಡು ಅಪರಂಜಿಯಾದುವು. ಮೌನ ಅರಿವನ್ನು ಬೆಳೆಸುತ್ತದೆಯೆಂಬು ದನ್ನು ಅವರು ಅನುಭವದಿಂದ ಅರಿತಿದ್ದರು.

"ನಾನು ಇಂಡಿಯಾಕ್ಕೆ ಬಂದಮೇಲೆ, ಇಲ್ಲಿನ ಪ್ರಾಚೀನ ಇತಿ ಹಾಸವನ್ನು ಅಧ್ಯಯನ ಮಾಡಿ, ಪೂರ್ವಕಾಲದಲ್ಲಿ ಭಾರತೀಯರು ಅನುಭವಿಸಿದ ಸ್ವಾತಂತ್ರ್ಯದ ಹಿರಿಮೆ ಎಂಥದೆಂಬುದನ್ನು ಕ್ರಮ ಕ್ರಮವಾಗಿ ತಿಳಿದುಕೊಂಡೆ. ಪಂಚಾಯಿತಿ ವ್ಯವಸ್ಥೆಗಳ ಬಗೆಗೆ ನಾನು ಓದಿದ್ದನ್ನು, ಕಣ್ಣಾರೆ ಕಂಡು ಅದು ಬುದ್ಧಿವಂತಿಕೆಯಿಂದ ಕೂಡಿದ ವ್ಯವಸ್ಥೆಯೆಂದರಿತೆ. ಇಲ್ಲಿ ಇಂಡಿಯಾದ ವಿವಿಧ ಭಾಗಗಳಲ್ಲಿ

ಭಾರತೀಯ ರಾಷ್ಟ್ರಜೀವನಕ್ಕೆ ಸಂಬಂಧಿಸಿದ ನಾನಾ ಸಮಸ್ಯೆಗಳನ್ನು ಕುರಿತು ಭಾಷಣ ಮಾಡಿದೆ. ಇಂಡಿಯಾದ ಬಗ್ಗೆ ಇಂಗ್ಲೆಂಡಿನ ಕರ್ತವ್ಯ ಲೋಪದ ವಿಚಾರವಾಗಿ, ಬ್ರಿಟಿಷ್ ಸಾಮ್ರಾಜ್ಯದಲ್ಲಿ ವರ್ಣ ಜನಾಂಗಗಳ ಸ್ಥಾನದ ವಿಚಾರವಾಗಿ, ಆ ಜನಾಂಗಗಳು ಅನುಭವಿಸುತ್ತಿರುವ ಕುಂದು ಕೊರತೆಗಳ ವಿಚಾರವಾಗಿ, ಇಂಗ್ಲೆಂಡಿನಲ್ಲಿ ಮೇಲಿಂದ ಮೇಲೆ ಭಾಷಣ ಮಾಡಿದೆ. ನಾನು ಈ ವಿಚಾರವಾಗಿ ಹಿಂದೆ ಕಟುವಾಗಿ ಟೀಕೆ ಮಾಡಿ ಬರೆದಿದ್ದುದನ್ನು ಮತ್ತೆ ಇಂಗ್ಲಿಷ್ ಜನಾಂಗದ ಗಮನಕ್ಕೆ ತಂದೆ. ನಾನು ಈ ಹಿಂದೆ ಈ ವಿಚಾರವಾಗಿ ಮಾಡಿದ್ದ ಅಧ್ಯಯನದ ಫಲ ನನ್ನ ನೆರವಿಗಿತ್ತು. ಆ ತಳಹದಿಯ ಮೇಲೆಯೇ ನನ್ನ ಕೆಲಸ ಮುಂದುವರೆದಿದೆ.

"ಮೊದಲಿನಿಂದಲೂ ನನಗೆ ಇಂಡಿಯಾದ ಬಗೆಗೆ ಅಭಿಮಾನವಿತ್ತು. ಆ ರಾಷ್ಟ್ರಕ್ಕೆ ಆಗಿರುವ ಅನ್ಯಾಯದ ಬಗೆಗೆ ನನಗೆ ಅನುತಾಪವಿತ್ತು. ಇಲ್ಲಿಗೆ ಬಂದ ಮೇಲೆ, ಈ ರಾಷ್ಟ್ರ ಅನುಭವಿಸುತ್ತಿರುವ ನೋವು, ಈ ನೋವನ್ನು ನಿವಾರಿಸಿಕೊಳ್ಳಲು ಅದು ಕಳೆದ ಕೆಲವು ದಶಕಗಳಿಂದ ಮಾಡುತ್ತಿರುವ ಪ್ರಯತ್ನಗಳ ಅರಿವಾಯಿತು. ನಾನು ಇಲ್ಲಿ ನೆಲೆಸಿ, ಇಂಡಿಯಾ ದೇಶವನ್ನು ನನ್ನ ಮಾತೃಭೂಮಿಯನ್ನಾಗಿ ಮಾಡಿಕೊಂಡ ಮೇಲೆ, ಈ ರಾಷ್ಟ್ರದ ಬಗೆಗೆ ನನ್ನ ಭಕ್ತಿ ಅಧಿಕವಾಗಿದೆ.

"ಇಲ್ಲಿ ನೆಲೆಸಿದ ಮೇಲೆ ಕೆಲವು ವರ್ಷಗಳ ಕಾಲ ನಾನು, ಪೌರಾತ್ಯಧರ್ಮಗಳ ಪ್ರಧಾನವಾಗಿ ಹಿಂದೂಧರ್ಮದ ಉನ್ನತಿಗಾಗಿ ಕೆಲಸ ಮಾಡಿದ್ದೇನೆ. ನನ್ನ ಈ ಕೆಲಸವನ್ನು, ಸರ್ ವಾಲಂಟೈನ್ ಚಿರಾಲ್ ರವರು ರಾಷ್ಟ್ರೀಯ ಭಾವನೆಯನ್ನು ಪ್ರಚೋದಿಸಲು ಸಹಕಾರಿಯೆಂದು ಕರೆದಿದ್ದಾರೆ. ಆ ಮಾತು ನಿಜ. ಇಂಡಿಯಾ ದೇಶದಲ್ಲಿ ಬೆಳೆದು ಬಲಗೊಂಡ ರಾಷ್ಟ್ರೀಯ ಚಳವಳಿಗಳೆಲ್ಲವೂ ಧರ್ಮದಲ್ಲಿ ಬೇರು ಬಿಟ್ಟಿದ್ದವು. ಉದಾಹರಣೆಗಾಗಿ ಶಿವಾಜಿಯ ರಾಜ್ಯ ಸ್ಥಾಪನೆಗೆ ಮೊದಲು ನಡೆದ ಧಾರ್ಮಿಕ ಚಳವಳಿಯನ್ನು ನೆನಪಿಗೆ ತಂದುಕೊಳ್ಳಬಹುದು. ಇತ್ತೀಚೆಗೆ ಬ್ರಾಹ್ಮಸಮಾಜ, ಆರ್ಯ ಸಮಾಜ, ಬ್ರಹ್ಮಜ್ಞಾನ ಸಮಾಜಗಳೂ, ಸ್ವಾಮಿ ವಿವೇಕಾನಂದರ ಧಾರ್ಮಿಕ ಚಳ

ವಳಿಯೂ, ಇಂದಿನ ರಾಜಕೀಯ ಚಳವಳಿಗೆ ಹಾದಿ ಮಾಡಿಕೊಟ್ಟವು. ನಾನು ಕೈಗೊಂಡ ವಿದ್ಯಾಭ್ಯಾಸ ವ್ಯವಸ್ಥೆ, ಹಿಂದೂ ಕಾಲೇಜಿನ ವಿದ್ಯಾರ್ಥಿಗಳಿಗೆ ಮಾಡಿದ ಭಾಷಣ, ಇವುಗಳ ಉದ್ದೇಶ ಕೂಡ, ಭಾರತೀಯರಲ್ಲಿ ದೇಶಾಭಿಮಾನವನ್ನೂ ದೇಶ ಪ್ರೇಮವನ್ನೂ ಪ್ರೇರೇಪಿಸುವುದೇ ಆಗಿತ್ತು.

"ಇತ್ತೀಚಿನ ಘಟನೆಗಳನ್ನು—ಐರೋಪ್ಯರು ಭಾರತೀಯರ ಬಗೆಗೆ ಅವಮಾನಕರವಾಗಿ ನಡೆದುಕೊಳ್ಳುವುದು, ಲಾರ್ಡ್ ಕರ್ಜನರ ದುಃಖ ಕರವಾದ ಆಡಳಿತ, ವಂಗ ವಿಭಜನೆಯಿಂದ ಬಂಗಾಳಿಗಳಿಗಾದ ನೋವು, ಉದ್ವೇಗ, ಅದರಿಂದ ಪ್ರಚೋದಿತವಾದ ಅರಾಜಕತೆಯ ಚಳವಳಿ, ಆ ಸಂಬಂಧದಲ್ಲಿ ಪೊಲೀಸರ ಕೈಗೆ ಸಿಕ್ಕಿದ ತರುಣರನ್ನು ಅವರಿಂದ ಪಾರು ಮಾಡಲು ನಾನು ಮಾಡಿದ ಪ್ರಯತ್ನ.......ಹೀಗೇ ಹಲವಾರು ಘಟನೆಗಳನ್ನು ನೋಡಿ, ಅವುಗಳ ಬಗೆಗೆ ಅನುಕಂಪ ಹೊಂದಿದಮೇಲೆ – ನನ್ನ ಹೃದಯದಲ್ಲಿ ಏನು ಧಗಧಗಿಸುತ್ತಿದ್ದಿತೋ ಅದನ್ನು ನಾಲಿಗೆ ಯಲ್ಲಿ ಆಡಿ ತೋರಿಸುವ ಕಾಲ ಬಂದಿತೆಂದು ಸ್ಪಷ್ಟವಾಯಿತು. ಅಂದರೆ ಮಾತೃಭೂಮಿಯ ಸ್ವಾತಂತ್ರ್ಯ, ಭಾರತ ರಾಷ್ಟ್ರಕ್ಕೆ ಸ್ವರಾಜ್ಯದ ಗೌರವ – ಇವುಗಳಿಗಾಗಿ ಹೋರಾಡುವ ಕಾಲ ಬಂದಿದೆಯೆಂಬುದು ಸ್ಪಷ್ಟ ವಾಯಿತು. ಈ ಸ್ವಾತಂತ್ರ್ಯ ಸಾಧನೆಯಲ್ಲಿ ನನ್ನದೊಂದು ಭಾಗ ವಿರಲಿ–ಆ ಭಾಗ ಎಷ್ಟೇ ಅಲ್ಪವಾದದ್ದಾದರೂ ಸರಿ ಇರಲಿ–ಎನ್ನಿಸಿತು. "**ವಂದೇ ಮಾತರಂ**" ಎಂಬ ಆರಾಧನಾ ಘೋಷಣೆಗೆ ಜೋಡಿಸಿ ನಿಲ್ಲುವ ಕೈಗಳಿಗೆ ಆ ಸೇವೆ ಸಲ್ಲಿಸುವುದಕ್ಕಿಂತ ಹೆಚ್ಚಿನ ವರವಿನ್ನೇನು ಬೇಕು ?"

ಆನಿ ಬೆಸೆಂಟ್‌ರವರು ಈ ರೀತಿ ಭಾರತಮಾತೆಯ ಸೇವೆ ಮಾಡ ಬೇಕೆಂದು ನಿರ್ಧರಿಸಿದೊಡನೆಯೇ ಅವರು ರಾಜಕೀಯ ರಂಗವನ್ನು ಪ್ರವೇಶಿಸಿದರು. ಪತ್ರಿಕೋದ್ಯಮದಲ್ಲಿ ಪಳಗಿದ್ದ, ಸತ್ವಪೂರ್ಣವಾದ ಬರವಣಿಗೆಗೆ ಎತ್ತಿದ ಕೈ ಆಗಿದ್ದ ಆಕೆ 'ಕಾಮನ್ ವೀಲ್' ಎಂಬ ವಾರ ಪತ್ರಿಕೆಯ ಮೂಲಕ ಭಾರತ ರಾಜಕೀಯ ಸೇವೆಯನ್ನಾರಂಭಿಸಿದ್ದು ಸಹಜವೇ ಆಗಿದೆ.

ಈ ಪತ್ರಿಕೆಯ ಮೊದಲನೆಯ ಸಂಚಿಕೆ ೧೯೧೯ರಲ್ಲಿ ಜನವರಿ ತಿಂಗಳಿನಲ್ಲಿ ಹೊರಬಿತ್ತು. ಜಗತ್ತಿನ ಯಾವುದೇ ದೇಶಕ್ಕೆ ಸಂಬಂಧಿಸಿ ಯಾವುದೇ ಸುಧಾರಣೆಯ ಚರ್ಚೆಗಾದರೂ ಈ ಪತ್ರಿಕೆಯಲ್ಲಿ ಎಡೆಯುಂಟೆಂಬ ವಿಶಾಲ ವ್ಯಾಪ್ತಿಯಿಂದ ಈ ಪತ್ರಿಕೆ ಸ್ಥಾಪಿತವಾಗಿದ್ದಿತಾದರೂ, ಇದರ ಪ್ರಧಾನ ಲಕ್ಷ್ಯ ಭಾರತವರ್ಷ ಮತ್ತು ಇಂಗ್ಲೆಂಡುಗಳ ನಡುವಿನ ರಾಜಕೀಯ ಸಂಬಂಧವನ್ನು ಚರ್ಚಿಸುವುದೂ ವಿಮರ್ಶಿಸುವುದೂ ಆಗಿತ್ತು. ಈ ಬಗ್ಗೆ ತಮ್ಮ ಪತ್ರಿಕೆಯ ನಿಲುವನ್ನು ವಿವರಿಸುತ್ತಾ ಆನಿ ಬೆಸೆಂಟ್‌ರು, ಪತ್ರಿಕೆಯ ಅಗ್ರಲೇಖನದ ಮೂಲಕ " ಇಂಡಿಯಾದಲ್ಲಿ ರೂಪುಗೊಳ್ಳುತ್ತಿರುವ ಚಳವಳಿಗಳು, ಆ ಚಳವಳಿಗಳ ಮೂಲಕ ಬ್ರಿಟಿಷ್ ಸಾಮ್ರಾಜ್ಯದ ಭವಿಷ್ಯವನ್ನು ಇಲ್ಲಿಂದ ನಿರ್ದೇಶಿಸುತ್ತಿರುವ ಜನರು, ಈ ಅಂಶಗಳನ್ನು ಕುರಿತು ಗ್ರೇಟ್ ಬ್ರಿಟನ್‌ಗೆ ತಿಳುವಳಿಕೆ ಕೊಡುವುದರ ಮೂಲಕ ಇಂಡಿಯಾ ಮತ್ತು ಗ್ರೇಟ್ ಬ್ರಿಟನ್‌ಗಳು ಪರಸ್ಪರ ಸಮೀಪಗತವಾಗುವಂತೆ ಮಾಡುವುದು ನಮಗೆ ಅತ್ಯಂತ ಪ್ರಿಯವಾದ ವಿಚಾರವಾಗಿದೆ." ಎಂದು ಘೋಷಿಸಿದರು. ಈ ವಿಚಾರ ಸರಣಿಯನ್ನು ಮುಂದುವರಿಸಿ, "ಬ್ರಿಟಿಷ್ ಕಾಮನ್‌ವೆಲ್ತ್"ನಲ್ಲಿ ಇಂಡಿಯಾಕ್ಕೆ "ಡೊಮಿನಿಯನ್ ಸ್ಟೇಟಸ್" ಅನ್ನು ಸಾಧಿಸುವುದು ತಮ್ಮ ರಾಜಕೀಯ ಗುರಿಯೆಂದು ಸ್ಪಷ್ಟಪಡಿಸಿದರು.

ಈ ಗುರಿಯನ್ನು ಸಾಧಿಸುವುದಕ್ಕಾಗಿ, ಹಳ್ಳಿಗಳಿಂದ ಆರಂಭ ಮಾಡಿಕೊಂಡು, ಕೇಂದ್ರಸರ್ಕಾರದವರೆಗೆ ಸಂಪೂರ್ಣ ಸ್ವರಾಜ್ಯ ತತ್ವದಮೇಲೆ ಆಡಳಿತ ವ್ಯವಸ್ಥೆಯನ್ನು ಕಟ್ಟಬೇಕೆಂಬುದೂ, ಈ ಕಾರ್ಯಕ್ರಮಕ್ಕೆ ಸಹಾಯಕವಾದ ಯೋಜನೆಗಳಿಗೆ ಬೆಂಬಲಕೊಡಬೇಕೆಂಬುದೂ ಆನಿ ಬೆಸೆಂಟ್‌ರವರ ಅಭಿಪ್ರಾಯವಾಗಿತ್ತು. ಎಂದರೆ, ಹಳ್ಳಿ ಪಂಚಾಯಿತಿಗಳು, ನಗರ ಸಭೆಗಳು, ಜಿಲ್ಲಾ ಬೋರ್ಡ್‌ಗಳು, ಪ್ರದೇಶಿಕ ಶಾಸನ ಸಭೆಗಳು, ಕೇಂದ್ರ ಶಾಸನಸಭೆ ಹೀಗೆ ಹಂತಹಂತವಾಗಿರುವ ಆಡಳಿತ ವ್ಯವಸ್ಥೆಯಲ್ಲಿ ಒಂದೊಂದು ಹಂತವೂ ಸ್ವರಾಜ್ಯ ತತ್ವದಮೇಲೆ ಆದರೆ ಪರಸ್ಪರ ಪೂರಕವಾಗಿ, ಕೆಲಸಮಾಡಬೇಕೆಂದು ಆನಿ ಬೆಸೆಂಟ್‌ರ ಆಶಯವಾಗಿತ್ತು.

ಭಾರತದ ಕೇಂದ್ರ ಶಾಸನಸಭೆಗೆ ಬ್ರಿಟಿಷ್ ಕಾಮನ್‌ವೆಲ್ತಿನಲ್ಲಿ ಸ್ವರಾಜ್ಯವನ್ನು ಪಡೆದಿರುವ ರಾಷ್ಟ್ರಗಳ ಶಾಸನಸಭೆಗಳಿಗಿರುವ ಅಧಿಕಾರ

ಗಳೆಲ್ಲವೂ ಇರಬೇಕೆಂದೂ, ಸಾಮ್ರಾಜ್ಯದಲ್ಲಿ ಸ್ವರಾಜ್ಯವನ್ನು ಪಡೆದಿರುವ ರಾಷ್ಟ್ರಗಳಿಗೆ ಬ್ರಿಟಿಷ್ ಸಾಮ್ರಾಜ್ಯ ಶಾಸನಸಭೆಯಲ್ಲಿ ಪ್ರಾತಿನಿಧ್ಯ ದೊರೆತಾಗ ಇಂಡಿಯಾಕ್ಕೂ ಅಂಥ ಪ್ರಾತಿನಿಧ್ಯ ಸಿಗಬೇಕೆಂಬುದೂ ಆನಿ ಬೆಸೆಂಟ್‌ರು ಆಶಿಸಿದ ವ್ಯವಸ್ಥೆಯಾಗಿತ್ತು.

"ಕಾಮನ್‌ವೀಲ್" ಪತ್ರಿಕೆಯನ್ನು ಆರಂಭಿಸಿ ಆರು ತಿಂಗಳಾಗುವ ಹೊತ್ತಿಗೆ ಅವರು ಒಂದು ದಿನಪತ್ರಿಕೆಯನ್ನಾರಂಭಿಸಿದರು. ಮದರಾಸಿನಲ್ಲಿ ಬಹಳ ಕಾಲದಿಂದ ಪ್ರಚುರವಾಗುತ್ತಿದ್ದು ಇಳಿಮುಖವಾಗಿದ್ದ "ದಿ ಮದ್ರಾಸ್ ಸ್ಟ್ಯಾಂಡರ್ಡ್" ಎಂಬ ದಿನಪತ್ರಿಕೆಯನ್ನು ಅವರು ಕೊಂಡುಕೊಂಡು ಅದಕ್ಕೆ 'ನ್ಯೂ ಇಂಡಿಯಾ' ಎಂದು ಹೆಸರಿಟ್ಟು ನಡೆಸಲಾರಂಭಿಸಿದರು. ಈ ಪತ್ರಿಕೆಯ ರಾಜಕೀಯ ಧ್ಯೇಯಕೂಡ 'ಕಾಮನ್‌ವೀಲ್' ಪತ್ರಿಕೆಯ ಧ್ಯೇಯದಂತೆಯೇ ಇದ್ದಿತು. ಈ ಪತ್ರಿಕೆ ಜೀವಂತವಾಗಿದ್ದ ಹದಿನೈದು ವರ್ಷಗಳ ಕಾಲ ಇದು ಕಾಂಗ್ರೆಸ್ ಮುಂತಾದ ರಾಜಕೀಯ ಸಂಸ್ಥೆಗಳಿಗೆ ಬೆಂಬಲಕೊಟ್ಟು ಭಾರತ ಸ್ವಾತಂತ್ರ್ಯ ಸಾಧನೆಗೆ ಸೇವೆಸಲ್ಲಿಸಿದ್ದಲ್ಲದೆ, ಭಾರತೀಯರಲ್ಲಿ ಐಕ್ಯತೆಯನ್ನು ಬೆಳೆಸಲು ಪ್ರಯತ್ನಿಸಿತು. ಭಾರತದ ಅತ್ಯಂತ ಪ್ರಮುಖ ಪತ್ರಿಕೆಗಳಲ್ಲೊಂದಾಗಿ ಮೆರೆಯಿತು. ಆನಿ ಬೆಸೆಂಟರು ಭಾರತ ರಾಜಕೀಯದಲ್ಲಿ ಪ್ರಮುಖವಾಗಿದ್ದಷ್ಟು ಕಾಲ ಈ ಪತ್ರಿಕೆ ಅವರ ಅಭಿಪ್ರಾಯಗಳನ್ನು ಪ್ರತಿಬಿಂಬಿಸುವ ಮುಖಪತ್ರವೂ ಆಗಿತ್ತು.

ಆನಿ ಬೆಸೆಂಟರು, ಭಾರತ ರಾಜಕೀಯ ರಂಗವನ್ನು ಪ್ರವೇಶಿಸಿ ಅಲ್ಲಿ ಸಾಧಿಸಿದ ಮಹತ್ಕಾರ್ಯಗಳನ್ನು ವಿವರಿಸುವ ಮೊದಲು, ಅವರ ಪ್ರವೇಶಕಾಲದಲ್ಲಿ ನಮ್ಮ ರಾಜಕೀಯ ರಂಗದ ಸ್ಥಿತಿ ಹೇಗಿತ್ತೆಂಬುದನ್ನು ಕೆಲವು ಮಾತುಗಳಲ್ಲಿ ಹೇಳುವುದು ಅವಶ್ಯಕ.

ಆ ಹೊತ್ತಿಗಾಗಲೇ ಕಾಂಗ್ರೆಸ್ ಸಂಸ್ಥೆ ಆರಂಭವಾಗಿ ಮೂವತ್ತು ವರ್ಷಗಳಾಗುತ್ತ ಬಂದಿತ್ತಾದರೂ ಒಟ್ಟಿನಲ್ಲಿ ಅದು ಅರ್ಜಿದಾರರ ಕೂಟವಾಗಿತ್ತೆಂದರೆ ತಪ್ಪಲ್ಲ. ವರ್ಷಕ್ಕೊಮ್ಮೆ ಇಂಡಿಯಾದ ಯಾವುದಾದರೊಂದು ಪಟ್ಟಣದಲ್ಲಿ ಸಭೆ ಸೇರುವುದು, ಬ್ರಿಟಿಷ್ ಸರ್ಕಾರವು ಇಂಡಿಯಾಕ್ಕೆ ಇಂಥಿಂಥ ಸೌಲಭ್ಯಗಳನ್ನು ಒದಗಿಸಬೇಕೆಂದು ಬೇಡಿಕೊಳ್ಳುವ ನಿರ್ಣಯಗಳನ್ನು ರಚಿಸಿ ಅವನ್ನು ಕುರಿತು ಗಂಭೀರ ಭಾಷಣಗಳನ್ನು ಮಾಡುವುದು. ನಿರ್ಣಯ

ಗಳನ್ನು ಅಂಗೀಕರಿಸಿ ಮನೆಗೆ ಹೋಗುವುದು ಇದಕ್ಕಿಂತ ಹೆಚ್ಚಿನ ಕೆಲಸವನ್ನು ಕಾಂಗ್ರೆಸ್ ಆಗಿನ್ನೂ ಸಾಧಿಸಿರಲಿಲ್ಲ. ಆ ಸಂಸ್ಥೆ ಬ್ರಿಟಿಷರ ನ್ಯಾಯನಿಷ್ಠೆಯಲ್ಲಿ ಸಂಪೂರ್ಣ ನಂಬಿಕೆಯುಳ್ಳ ವಿದ್ಯಾವಂತರ ಗುಂಪಾಗಿತ್ತೇ ಹೊರತು–ಜನಸಾಮಾನ್ಯರೊಡನೆ ಯಾವ ಸಂಪರ್ಕವನ್ನೂ ಬೆಳೆಸಿಕೊಂಡಿರಲಿಲ್ಲ. ಕಾಂಗ್ರೆಸ್ಸಿನ ಈ ಅರ್ಜಿಕಾರರ ಕೂಟದ ಮನೋವೃತ್ತಿಯನ್ನು ತೀವ್ರವಾಗಿ ನಿರೋಧಿಸಿದವರಲ್ಲಿ ಮೊದಲನೆಯವರೆಂದರೆ ಲೋಕಮಾನ್ಯ ಬಾಲ ಗಂಗಾಧರ ತಿಲಕರು. ಇವರ ಪ್ರಯತ್ನದಿಂದ ಕಾಂಗ್ರೆಸ್ಸಿನಲ್ಲಿ ನವಶಕ್ತಿಸಂಚಾಲನ ಆರಂಭವಾಗುತ್ತಿದ್ದ ಕಾಲದಲ್ಲಿ ಆನಿ ಬೆಸೆಂಟರು ಕಾಂಗ್ರೆಸ್ ಸಂಸ್ಥೆಯಲ್ಲಿ ಆಸಕ್ತರಾದರೆನ್ನಬಹುದು.

ಆನಿ ಬೆಸೆಂಟರು ಇಂಡಿಯಾಕ್ಕೆ ಬರುವ ಮೊದಲು ದೀರ್ಘಕಾಲ ರಾಜಕೀಯ ಚಳವಳಿಗಳಲ್ಲಿ ಭಾಗವಹಿಸಿ ಸಾರ್ವಜನಿಕ ಚಳವಳಿಗಳು ಯಶಸ್ವಿಯಾಗಬೇಕಾದರೆ ಅವನ್ನು ಯಾವ ರೀತಿ ನಡೆಯಿಸಬೇಕೆಂಬ ಬಗೆಗೆ ತುಂಬಾ ಅನುಭವವನ್ನು ಗಳಿಸಿಕೊಂಡಿದ್ದರು. ಅವರು ತಮ್ಮ ಈ ಅನುಭವವನ್ನು ಕಾಂಗ್ರೆಸ್ಸಿನ ಮೂಲಕ ರಾಷ್ಟ್ರಸೇವೆಗೆ ಮೀಸಲು ಮಾಡಿದರು. ಯಾವ ಚಳವಳಿಯೇ ಆಗಲಿ ಅದರ ವಿಚಾರವಾಗಿ ಜನರಲ್ಲಿ ಪ್ರಬಲವಾದ ಆಸಕ್ತಿಯುಂಟಾಗದೆ, ಅದು ಬಲಗೊಳ್ಳದು, ಯಶಸ್ವಿಯಾಗದು. ಜನರಲ್ಲಿ ಇಂಥ ಆಸಕ್ತಿಯನ್ನುಂಟುಮಾಡಬೇಕಾದರೆ, ಅವರಿಗೆ ಚಳವಳಿಯ ವಿಚಾರವಾಗಿ ತಕ್ಕಮಟ್ಟಿಗಾದರೂ ತಿಳುವಳಿಕೆಯುಂಟಾಗಬೇಕು. ಹೀಗಾಗಬೇಕಾದರೆ ಚಳವಳಿಯ ವಿಚಾರವಾಗಿ ತಕ್ಕಷ್ಟು ಪ್ರಚಾರವಾಗಬೇಕು. ಆನಿ ಬೆಸೆಂಟರು ಈ ಭಾವನೆಗಳನ್ನು ತಳಹದಿಯನ್ನಾಗಿಟ್ಟುಕೊಂಡು ತಮ್ಮ ರಾಜಕೀಯ ಕಾರ್ಯವನ್ನಾರಂಭಿಸಿದರು. ಪ್ರಚಾರದಿಂದಾಗಿ ಜನರಲ್ಲಿ ಮೂಡುವ ಉತ್ಸಾಹ ಕಾರ್ಯಾಸಕ್ತಿಗಳನ್ನು ಹೇಗೆ ಸದುಪಯೋಗ ಮಾಡಿಕೊಳ್ಳಬೇಕು. ಅವು ವಿಷಮ ಮಾರ್ಗಕ್ಕೆ ಬೀಳದಂತೆ ನೋಡಿಕೊಳ್ಳುವುದು ಹೇಗೆ ಎಂಬುದನ್ನು ಚೆನ್ನಾಗಿ ಅರಿತಿದ್ದ ಆನಿ ಬೆಸೆಂಟ್‌ರವರು ನಿಶ್ಚಲವಾದ ಸರೋವರದಂತಿದ್ದ ಭಾರತ ರಾಜಕೀಯವನ್ನು, ಪುಟಿಯುತ್ತ, ನೆಗೆಯುತ್ತ, ವಿಸ್ತಾರಗೊಳ್ಳುತ್ತ ಹರಿಯುವ ಪರ್ವತಝರಿಯನ್ನಾಗಿ ಮಾಡಿದರು.

ಭಾರತವರ್ಷ ಬ್ರಿಟಿಷ್ ಕಾಮನ್‌ವೆಲ್ತ್‌ನ ಒಳಗಿದ್ದರೂ ಅದು ಸಂಪೂರ್ಣ ಸ್ವಾತಂತ್ರ್ಯವುಳ್ಳ ರಾಷ್ಟ್ರವಾಗಿರಬೇಕೆಂಬುದು ಆನಿ ಬೆಸೆಂಟರ

ರಾಜಕೀಯ ಧ್ಯೇಯವಾಗಿತ್ತೆಂಬುದನ್ನು ಈ ಮೊದಲೇ ತಿಳಿದಿದ್ದೇವೆ. ಈ ಧ್ಯೇಯ ಸಾಧನೆಯಲ್ಲಿ ಪ್ರಜಾವರ್ಗದ ಪ್ರಬಲ ಬೆಂಬಲವನ್ನು ಗಳಿಸಿ ಕೊಳ್ಳಬೇಕೆಂಬುದು ಅವರ ಕಾರ್ಯ ನೀತಿಯಾಗಿತ್ತು. ಈ ಕಾರ್ಯನೀತಿ ಅಂದಿನ ಕಾಂಗ್ರೆಸ್ಸಿನ ಕಾರ್ಯನೀತಿಯಿಂದ ಬೇರೆಯಾಗಿತ್ತು. ಆದ್ದರಿಂದ ಅಂದಿನ ಅರ್ಜಿಕೂಟದ ನಾಯಕರಿಗೆ ಆನಿ ಬೆಸೆಂಟ್‌ರ ಧ್ಯೇಯ ಕಾರ್ಯಕ್ರಮ ಗಳೆರಡೂ 'ತುಂಬಾ ಕ್ರಾಂತಿಕಾರಕ'ವಾಗಿ ಕಂಡವು. ಭಾರತ ರಾಜಕೀಯ ರಂಗದಲ್ಲಿ ಆಕೆಯ ಶಕ್ತಿ ಬೆಳೆದರೆ, ತಮ್ಮ ಮಾತಿಗೆ ಬೆಲೆಯಿಲ್ಲದೆ ಹೋಗುವು ದೆಂಬ ಭಯವೂ ಮುಂದಗಾಮಿಗಳಿಗುಂಟಾಯಿತು. ಆ ಹೊತ್ತಿಗಾಗಲೇ ಬಾಲಗಂಗಾಧರ ತಿಲಕರು ಮುಂದಗಾಮಿಗಳ ವಿರುದ್ಧ ಬಂಡಾಯವೆಬ್ಬಿಸಿದ್ದರು. ಅವರು ಸಂಪೂರ್ಣ ಸ್ವರಾಜ್ಯವಾದಿಗಳಾದದ್ದರಿಂದ ಆನಿ ಬೆಸೆಂಟ್‌ರು ಅವರೊಡನೆ ಸೇರುವುದೇ ಹೆಚ್ಚು ಸಂಭವನೀಯವೆಂದೂ ಭಾರತ ರಾಜಕೀಯ ದಲ್ಲಿ ತಿಲಕ–ಆನಿ ಬೆಸೆಂಟ್‌ರ ಒಕ್ಕೂಟವೆಂದರೆ ಬೆಂಕಿ ಗಾಳಿಗಳು ಸೇರಿ ಬಂದಂತೆ ಎಂದೂ ಮುಂದಗಾಮಿಗಳು ಭಾವಿಸಿದರು. ಅವರ ಈ ನಿರೀಕ್ಷಣೆ ನಿಜವಾಯಿತು.

ಆನಿ ಬೆಸೆಂಟ್‌ರು ಭಾರತ ರಾಜಕೀಯ ರಂಗವನ್ನು ಪ್ರವೇಶಿಸಿ ದಾಗ ಮೊದಲನೆಯ ಮಹಾಯುದ್ಧ ನಡೆಯುತ್ತಿತ್ತು. ಇಂಡಿಯಾದ ಆಡಳಿತ ಮಿಂಟೋ–ಮಾರ್ಲೆ ಸಂವಿಧಾನವನ್ನನುಸರಿಸಿ ನಡೆದಿತ್ತು. ಅಂದರೆ, ಒಂದೊಂದು ಪ್ರಾಂತದಲ್ಲಿಯೂ ಒಂದೊಂದು ಶಾಸನ ಸಭೆ ಏರ್ಪಾಡಾಗಿತ್ತು. ಅದರ ಸದಸ್ಯರಲ್ಲಿ ಬಹುಮಂದಿ, ಜನರು ಆರಿಸಿದ ಪ್ರತಿನಿಧಿಗಳೇ ಆಗಿದ್ದರು. ಆದರೆ ಆಡಳಿತದಲ್ಲಿ ಈ ಪ್ರತಿನಿಧಿಗಳ ಅಪೇಕ್ಷೆಯಂತೆ ನಡೆಯಬೇಕೆಂಬ ನಿಯಮವೇನೂ ಇರಲಿಲ್ಲ. ಪ್ರಾಂತಗಳ ಗೌರ್ನರರು ತಮ್ಮ ಸ್ವಂತ ಮಂತ್ರಾ ಲೋಚನೆ ಸಭೆಯ ಸಲಹೆ ಪಡೆದು, ತಮಗೆ ಸರಿದೋರಿದಂತೆ ರಾಜ್ಯ ವಾಳುತ್ತಿದ್ದರು. ಕೇಂದ್ರಶಾಸನ ಸಭೆಯ ಸದಸ್ಯರಲ್ಲಿ ಕೆಲವರು ಮಾತ್ರ ಜನರಿಂದ ಆರಿಸಲ್ಪಟ್ಟವರು. ವೈಸ್ರಾಯರು ಈ ಸಭೆಯ ಸೂಚನೆಗಳನ್ನು ಮಾನ್ಯಮಾಡಬೇಕೆಂಬ ನಿಯಮವೇನಿರಲಿಲ್ಲ. ಇವರೂ ಗೌರ್ನರುಗಳಂತೆ ತಮ್ಮ ಸ್ವಂತ ಮಂತ್ರಾಲೋಚನ ಸಭೆಯ ಸಲಹೆ ಪಡೆದು ತಮಗೆ ಸರಿ ತೋರಿದಂತೆ ರಾಜ್ಯಾಡಳಿತ ನಡೆಸುತ್ತಿದ್ದರು. ಈ ಸಂವಿಧಾನವನ್ನು

ಸ್ವಲ್ಪಮಟ್ಟಿಗೆ ಉತ್ತಮಗೊಳಿಸಿ, ಜನರಿಗೆ ಇನ್ನು ಸ್ವಲ್ಪ ಹೆಚ್ಚಿನ ಪ್ರಾತಿನಿಧ್ಯ ದೊರೆಯಬೇಕೆಂದು ಮುಂದಗಾಮಿಗಳು ವಾದಿಸುತ್ತಿದ್ದಾಗ, ಆನಿ ಬೆಸೆಂಟರು "ಹೋಂ-ರೂಲ್" (ಸ್ವರಾಜ್ಯ)ದ ಬೇಡಿಕೆಯನ್ನು ಮುಂದಿಟ್ಟರು. ಮಂದ ಗಾಮಿಗಳ ರಾಜಕೀಯ ನೀತಿಯನ್ನು ಸಮ್ಮತಿಸದೆ, ತೀವ್ರವಾದ, ಚುರುಕಾದ ಕಾರ್ಯಕ್ರಮವನ್ನು ಅಪೇಕ್ಷಿಸುತ್ತಿದ್ದ ತರುಣರಿಗೆ ಆನಿ ಬೆಸೆಂಟ್‌ರ "ಹೋಂ-ರೂಲ್" ಚಳವಳಿ ಹಿಡಿಯಿತು. ಈ ಚಳವಳಿ ತರುಣರ ಉತ್ಸಾಹದಿಂದಾಗಿ ಹಳ್ಳಿಹಳ್ಳಿಗೂ ಹರಡಿತು. ಸೆರೆಮನೆಯ ವಾಸದಿಂದ ಹಿಂದಿರುಗಿದ್ದ ಬಾಲ ಗಂಗಾಧರ ತಿಲಕರು ಕೂಡ ಆನಿ ಬೆಸೆಂಟ್‌ರ ಈ ಚಳವಳಿಯ ಬೆಂಬಲಕ್ಕೆ ನಿಂತರು. "ಹೋಂ-ರೂಲ್" ಚಳವಳಿಯನ್ನು ಕೈಗೊಂಡ ಮೇಲೆ ಆನಿ ಬೆಸೆಂಟರು ಪುಸ್ತಕ, ಹಸ್ತಪತ್ರಿಕೆಗಳ ಮೂಲಕವೂ 'ನ್ಯೂ ಇಂಡಿಯಾ' 'ಕಾಮನ್ ವೀಲ್' ಪತ್ರಿಕೆಗಳ ಮೂಲಕವೂ ಚಳವಳಿಯನ್ನು ಕುರಿತು ಬಲವಾದ ಪ್ರಚಾರ ನಡೆಸಿದರು. ದೇಶದ ವಿವಿಧ ಭಾಗಗಳಲ್ಲಿ ಸಂಚಾರ ಮಾಡಿ, ಭಾರತ ಸ್ವಾತಂತ್ರ್ಯಕ್ಕಾಗಿ ತಾವು ಹೂಡಿರುವ ಚಳವಳಿಯನ್ನು ಕುರಿತು ಮೇಲಿಂದ ಮೇಲೆ ಭಾಷಣ ಮಾಡಿದರು. ಈ ಹೋರಾಟದ ಹಿನ್ನೆಲೆ ಜನರಿಗೆ ಅರ್ಥವಾಗಲೆಂದು "ಇಂಡಿಯಾ ಸ್ವಾತಂತ್ರ್ಯ ಸಾಧನೆಗೇನು ಮಾಡಿದೆ" ಎಂದು ಒಂದು ಲೇಖನ ಮಾಲೆಯನ್ನಾರಂಭಿಸಿ ಅದರಲ್ಲಿ ಕಳೆದ ಮೂವತ್ತು ವರ್ಷಗಳಿಂದ ಕಾಂಗ್ರೆಸ್ ಕೈಗೊಂಡಿದ್ದ ಕಾರ್ಯಗಳನ್ನು ನಿರೂಪಿಸಿದರು. ಇಂಗ್ಲೆಂಡಿನಲ್ಲಿ ಈ ಬಗೆಗೆ ಪ್ರಚಾರ ಮಾಡುವುದಕ್ಕಾಗಿ "ಇಂಡಿಯಾ: ಒಂದು ಜನಾಂಗ" ಎಂಬ ಪುಸ್ತಕವನ್ನು ಇಂಗ್ಲೆಂಡಿನಲ್ಲಿ ಪ್ರಕಟಿಸಿದರು. ಈ ಚಳವಳಿಯ ಪ್ರಭಾವ ೧೯೧೫ನೇ ಡಿಸೆಂಬರ್ ತಿಂಗಳಲ್ಲಿ ಬೊಂಬಾಯಿನಲ್ಲಿ ಸಮಾವೇಶವಾದ ಕಾಂಗ್ರೆಸ್ ಅಧಿವೇಶನದಲ್ಲಿ ಚೆನ್ನಾಗಿ ವ್ಯಕ್ತವಾಯಿತು. ಅನೇಕಮಂದಿ ಕಾಂಗ್ರೆಸಿಗರು ಆನಿ ಬೆಸೆಂಟ್‌ರವರ ರಾಜಕೀಯ ಧ್ಯೇಯವನ್ನೊಪ್ಪಿಕೊಂಡರು.

ಬೊಂಬಾಯಿ ಕಾಂಗ್ರೆಸ್ಸಿನಿಂದ ಹಿಂದಿರುಗಿ ಬಂದಮೇಲೆ ಆನಿ ಬೆಸೆಂಟರು ತಮ್ಮ 'ಹೋಂ-ರೂಲ್' ಚಳವಳಿಯನ್ನು ಇನ್ನಷ್ಟು ಬಲಗೊಳಿಸಿದರು. ಈ ಚಳವಳಿಯನ್ನು ತೀವ್ರವಾಗಿ ಮುಂದುವರೆಸುವ ಉದ್ದೇಶದಿಂದ 'ಹೋಂ-ರೂಲ್ ಲೀಗ್' ಎಂಬ ಒಂದು ಸಂಸ್ಥೆಯನ್ನೂ

ಸ್ಥಾಪಿಸಿದರು. ಈ ಚಳವಳಿ ಬಲವಾದಂತೆ ಬ್ರಿಟಿಷ್ ಆಡಳಿತಗಾರರ ಕಣ್ಣು ಕೆಂಪಾಯಿತು. ಈ ಚಳವಳಿಯನ್ನೂ ಅದಕ್ಕೆ ಬೆಂಬಲ ಕೊಡತ್ತಿದ್ದ 'ನ್ಯೂ ಇಂಡಿಯಾ' ಪತ್ರಿಕೆಯನ್ನೂ ಮುರಿಯಬೇಕೆಂದು ಅವರು ನಿರ್ಧರಿಸಿದರು. ಮೊದಲನೆಯ ಹೊಡೆತ 'ನ್ಯೂ ಇಂಡಿಯಾ' ಮೇಲೆ ಬಿತ್ತು. ೧೯೧೬ನೇ ಮೇ ೨೬ನೇ ತಾರೀಖಿನ ದಿನ ಮದರಾಸು ಸರ್ಕಾರ ಇದ್ದಕ್ಕಿದ್ದಂತೆ ಆ ಪತ್ರಿಕೆಯಿಂದ ಎರಡುಸಾವಿರ ರೂಪಾಯಿ ಜಾಮೀನು ಹಣ ಬೇಕೆಂದು ಆಜ್ಞೆ ಮಾಡಿತು. 'ನ್ಯೂ ಇಂಡಿಯಾ'ದ ಮೇಲೆ ಆರಂಭವಾದ ಈ ಅನ್ಯಾಯದ ಧಾಳಿಯನ್ನು ಆನಿ ಬೆಸೆಂಟರು ಬಲವಾಗಿ ಟೀಕಿಸುತ್ತಾ ಆ ಪತ್ರಿಕೆಯಲ್ಲೇ ಈ ರೀತಿ ಬರೆದರು.

> ಇಂಥ ಆಜ್ಞೆಯನ್ನು ಹೊರಡಿಸಲು ಕಾರಣವೇನೆಂಬುದನ್ನು ಸರ್ಕಾರದವರು ತಿಳಿಯಪಡಿಸಿಲ್ಲ – "ಜೋ ಹುಕುಂ". ಅಂತು ಈ ಆಜ್ಞೆಯಿಂದ ನಮ್ಮ ಆಸ್ತಿಗೆ ಅಪಾಯವುಂಟಾಗುವ ಸಂಭವವಿದೆ. ನಮ್ಮ ವಾಣಿಜ್ಯ ನಾಶವಾಗುವ ಸಂಭವವಿದೆ. ನಾವು ಏನಾದರೂ ತಪ್ಪು ಮಾಡಿದ್ದಲ್ಲಿ, ನಾವು ಅದನ್ನು ಸರಿಪಡಿಸಿಕೊಳ್ಳುವಂತೆ ಕೂಡ ಇಲ್ಲ. ಏಕೆಂದರೆ ನಮ್ಮ 'ಸರ್ವಾಧಿಕಾರಿ' ನಮ್ಮ ತಪ್ಪಿತವೇನೆಂಬುದನ್ನು ತಿಳಿಸಿಲ್ಲ; "ನಿಮ್ಮ ಹಣ; ಇಲ್ಲವೆ ನಿಮ್ಮ ಪ್ರಾಣ" ಎಂಬುದೇ ಈ ಸರ್ವಾಧಿಕಾರಿಗಳ ಕಾರ್ಯನೀತಿಯಾಗಿದೆ. ತಪ್ಪು ಯಾವುದು ಎಂದು ತಿಳಿಯದೆ, ನಾವು ಜಾಮೀನು ಹಣ ಕೊಟ್ಟು ಮಾರನೆಯ ದಿನವೇ ಮತ್ತೆ ಅಂಥದೇ ತಪ್ಪು ಮಾಡಬಹುದು. ಹೀಗಾದಲ್ಲಿ ನಾವು ಕೊಟ್ಟ ಜಾಮೀನು ಹಣ ಮಾಯವಾಗಿ ಬಿಡುತ್ತದೆ. ಹತ್ತು ಸಾವಿರ ರೂಪಾಯಿ ಬೇಕೆಂದು ಇನ್ನೊಂದು ಆಜ್ಞೆ ಬರುತ್ತದೆ. ಮದರಾಸಿನಲ್ಲೂ ಇಂಡಿಯಾದ ಇತರ ಭಾಗಗಳಲ್ಲಿ ಬ್ರಿಟಿಷರ ನ್ಯಾಯನೀತಿ ಹೊಂದಿರುವ ವಿಕೃತ ರೂಪ ಇದು.

ಸರ್ಕಾರದ ಜಾಮೀನು ಆಜ್ಞೆಯನ್ನು ಆನಿ ಬೆಸೆಂಟರು ತಮ್ಮ ಪತ್ರಿಕೆಯಲ್ಲಿ ಖಂಡಿಸಿದ್ದು ಅಲ್ಲದೆ, ಆ ಅನ್ಯಾಯವಾದ ಆಜ್ಞೆಯ ವಿರುದ್ಧ ಹೈಕೋರ್ಟಿನಲ್ಲಿ ವಿಮರ್ಶೆ ಅರ್ಜಿ ಹಾಕಿದರು. ಇಂಡಿಯಾದ ವೃತ್ತ ಪತ್ರಿಕೆಗಳ ಸಂಘವು ಮದರಾಸು ಸರ್ಕಾರ ನ್ಯೂ ಇಂಡಿಯಾ ಪತ್ರಿಕೆಯ ವಿರುದ್ಧ

ಕೈಗೊಂಡಿದ್ದ ಕಾರ್ಯಕ್ರಮವನ್ನೂ ಆ ಕಾರ್ಯಕ್ರಮಕ್ಕೆ ಆಧಾರವಾಗಿದ್ದ ೧೯೧೦ರ ಪತ್ರಿಕಾ ಶಾಸನವನ್ನೂ ತೀವ್ರವಾಗಿ ಖಂಡಿಸಿತು. ಇಡೀ ದೇಶದ ಮೇಲೆಲ್ಲಾ ಈ ಖಂಡನೆ ನಡೆದಿದ್ದಲ್ಲದೆ, 'ನ್ಯೂ ಇಂಡಿಯಾ' ಪತ್ರಿಕೆಯನ್ನು ಸರ್ಕಾರದ ಹೊಡೆತದಿಂದ ರಕ್ಷಿಸುವುದಕ್ಕಾಗಿ ಒಂದು ಸಾರ್ವಜನಿಕ ನಿಧಿ ಕೂಡ ಕೂಡಿ ಸಲ್ಪಟ್ಟಿತು. ೧೯೧೦ರ ಪತ್ರಿಕಾ ಶಾಸನವನ್ನು ರದ್ದುಗೊಳಿಸಿ ಪತ್ರಿಕಾ ಸ್ವಾತಂತ್ರ್ಯವನ್ನು ಗೌರವಿಸಬೇಕೆಂದು ವೈಸ್ರಾಯರಿಗೆ ಒಂದು ಮನವಿಕೂಡ ಸಲ್ಲಿಸಲ್ಪಟ್ಟಿತು. ಈ ಮನವಿಯನ್ನು ವೈಸ್ರಾಯರಿಗೆ ಸಲ್ಲಿಸಲು ಹೋಗಿದ್ದ ಶಿಷ್ಟಮಂಡಲಕ್ಕೆ ವೈಸ್ರಾಯರು ಕೊಟ್ಟ ನಿರಾಕರಣೆಯ ಉತ್ತರದಿಂದಾಗಿ, ಬ್ರಿಟಿಷ್ ದಬ್ಬಾಳಿಕೆಯ ಬಗೆಗೆ ಭಾರತೀಯರಿಗೆ ತುಂಬಾ ಜಿಗುಪ್ಸೆ ಯುಂಟಾಯಿತು.

ಹೀಗೆ, ಮದರಾಸು ಸರ್ಕಾರದ ಜಾಮೀನು ಬೇಡಿಕೆ ಆಜ್ಞೆ ಆನಿ ಬೆಸೆಂಟರ ಸ್ವರಾಜ್ಯ ಚಳವಳಿಯನ್ನೂ ಆ ಚಳವಳಿಯ ಮುಖಪತ್ರವಾಗಿದ್ದ ನ್ಯೂ ಇಂಡಿಯಾ ಪತ್ರಿಕೆಯನ್ನೂ ಕುಗ್ಗಿಸಿ ಬಲಹೀನಗೊಳಿಸುವುದರ ಬದಲು ಅದು ಹಿಗ್ಗಿ ಪ್ರಬಲಗೊಳ್ಳುವಂತೆ ಮಾಡಿತು.

ತಮ್ಮ ಈ ಮೊದಲ ಪ್ರಯತ್ನ ವಿಫಲವಾದ ಮೇಲೆ ಬ್ರಿಟಿಷ್ ಆಳರಸರು ಬೇರೆ ವಿಧವಾದ ದಬ್ಬಾಳಿಕೆಗೆ ಕೈ ಹಾಕಿದರು. ಆಗ ಬೊಂಬಾಯಿನ ಗೌರ್ನರ್ ಆಗಿದ್ದ ಲಾರ್ಡ್ ವಿಲ್ಲಿಂಗ್‌ಡನ್‌ರವರು ೧೯೧೬ ನೇ ಜುಲೈ ಹತ್ತನೇ ತಾರೀಖು ಒಂದು ಆಜ್ಞೆ ಹೊರಡಿಸಿ ಆನಿ ಬೆಸೆಂಟರು ಬೊಂಬಾಯಿ ಪ್ರಾಂತ ವನ್ನು ಪ್ರವೇಶಿಸಕೂಡದೆಂದು ನಿಷೇಧಿಸಿದರು.

ಆ ಆಜ್ಞೆಯನ್ನು ನ್ಯೂ ಇಂಡಿಯಾ ಪತ್ರಿಕೆಯಲ್ಲಿ ವಿವೇಚಿಸುತ್ತಾ ಆನಿ ಬೆಸೆಂಟರು, ತಾವು ಈ ಆಜ್ಞೆಯನ್ನು ಮನಃ ಪೂರ್ವಕವಾಗಿ ಉಲ್ಲಂಘಿ ಸುವುದಿಲ್ಲವೆಂದೂ, ಹಾಗೆ ತಿಳಿದೂ ತಿಳಿದೂ ಈ ಆಜ್ಞೆಯನ್ನು ಉಲ್ಲಂಘಿಸು ವುದು ಹುಚ್ಚುತನವಲ್ಲದೆ ಬೇರೆಯಲ್ಲವೆಂದೂ ಹೇಳಿ, ತಾವು ಬೊಂಬಾಯಿ ಪ್ರಾಂತವನ್ನು ಪ್ರವೇಶಿಸುವುದರಿಂದ ಅಲ್ಲಿ ಸಾರ್ವಜನಿಕ ಶಾಂತಿಗೆ ಭಂಗವುಂಟಾ ಗುವುದಾದರೆ ಅಲ್ಲಿ ಸಾರ್ವಜನಿಕ ಶಾಂತಿ ಬಹುಸುಲಭವಾಗಿ ಅಶಾಂತವಾಗುವ ಸ್ಥಿತಿಗೆ ಬಂದಿರಬೇಕೆಂದೂ, ಇಂಥ ಪರಿಸ್ಥಿತಿಯಲ್ಲಿ ಗೌರ್ನರ್‌ರವರೂ ಅವರ ಸಲಹೆಗಾರರೂ ನಮ್ಮ ಕನಿಕರಕ್ಕೆ ಪಾತ್ರರು! ಎಂದೂ ಹಾಸ್ಯದ ಚಟಾಕಿ

ಹಾರಿಸಿದರು.

ಆ ಆಜ್ಞೆಯ ವಿಫಲತೆಯನ್ನು ಚರ್ಚಿಸುತ್ತಾ :

ತಮ್ಮ ಆಡಳಿತ ಎಷ್ಟು ಹೀನಾಯಕರವಾಗಿದೆಯೆಂಬುದನ್ನು ತಮ್ಮ ಕೃತಿಗಳ ಮೂಲಕ ಪ್ರದರ್ಶಿಸುವುದರಿಂದ, ಜನರ ಸ್ವರಾಜ್ಯಾಭಿಲಾಷೆ ಯನ್ನು ತಡೆಗಟ್ಟಲು ಸಾಧ್ಯವಿಲ್ಲವೆಂಬ ಸಹಜಸಾಮಾನ್ಯ ಅಂಶ ಕೂಡ ಆಳರಸರ ತಲೆಗೆ ಹೊಳೆಯುವುದಿಲ್ಲವೇಕೆ ಎಂದು ನಾನು ಆಶ್ಚರ್ಯ ಪಡುತ್ತೇನೆ. ನನ್ನನ್ನು ಸಗ್ಗ ಬಡಿಯಲು ಅವರು ಹೆಚ್ಚು ಹೆಚ್ಚು ಪ್ರಯತ್ನಪಟ್ಟಂತೆ, ಅಂಥ ದಬ್ಬಾಳಿಕೆಯನ್ನೂ ಹಿಂಸೆಯನ್ನೂ ಕೊನೆಗಾಣಿಸಿ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳಬೇಕೆಂಬ ಆಕಾಂಕ್ಷೆ ಹೆಚ್ಚು ತೀವ್ರವಾಗಿ ಬೆಳೆಯುತ್ತದೆ-ಇಂಡಿಯಾ ದೇಶದಲ್ಲಿ. ಲಾರ್ಡ್ ವಿಲ್ಲಿಂಗ್‌ಡನ್‌ರವರು ತುಂಬಾ ತಡಮಾಡಿದರು. ಕಳೆದ ಕ್ರಿಸ್‌ಮಸ್ ಕಾಲದಲ್ಲಿ ನಾನು ಬೊಂಬಾಯಿನಲ್ಲಿದ್ದೆ. ಮತ್ತೆ ಕಳೆದ ಮೇ ತಿಂಗಳಿನಲ್ಲಿ ಕೂಡ ಬೊಂಬಾಯಿನಲ್ಲಿ ಕೆಲ ದಿನಗಳು ಇದ್ದೆ. ಈಗ ಜುಲೈ ಹತ್ತರಲ್ಲಿ ಈ ಆಜ್ಞೆ ಹೊರಟಿದೆ.

ಎಂದು ಬರೆದರು.

ಈ ಆಜ್ಞೆ ಹೊರಟು ಎರಡು ತಿಂಗಳಾಗುವ ಹೊತ್ತಿಗೆ ಸೆಪ್ಟೆಂಬರ್ ತಿಂಗಳಲ್ಲಿ ಮಧ್ಯಪ್ರಾಂತದ ಸರ್ಕಾರದವರು ಬೊಂಬಾಯಿ ಪ್ರಾಂತದವರಂತೆ ತಾವೂ ಒಂದು ನಿಷೇಧಾಜ್ಞೆಯನ್ನು ಹೊರಡಿಸಿದರು. ಈ ಸಂಬಂಧದಲ್ಲಿ ಆನಿ ಬೆಸೆಂಟರು ಒಂದು ಹೇಳಿಕೆ ಹೊರಡಿಸಿ, ಮಧ್ಯಪ್ರಾಂತದಲ್ಲಿ ಶಾಂತಿಭಂಗ ಮಾಡಬೇಕೆಂಬ ಉದ್ದೇಶದಿಂದ ತಾವು ಅಲ್ಲಿಗೆ ಹೋಗುತ್ತಿಲ್ಲ ವೆಂದೂ ಅಲ್ಲಿ ಸಮಾವೇಶವಾಗಲಿದ್ದ ಬ್ರಹ್ಮಜ್ಞಾನ ಸಮಾಜದ ಅಧಿವೇಶನದಲ್ಲಿ ಭಾಗವಹಿಸಲು ಹೋಗುತ್ತಿರುವುದಾಗಿಯೂ ಸ್ಪಷ್ಟಪಡಿಸಿದರು.

ವಿವಿಧ ಪ್ರಾಂತ ಸರ್ಕಾರಗಳು ಅವರ ಮೇಲೆ ಈ ರೀತಿ ನಿಷೇಧಾಜ್ಞೆ ಹೊರಡಿಸುತ್ತಿದ್ದುದು ಜನರ ಮನಸ್ಸಿಗೆ ತುಂಬಾ ನೋವನ್ನುಂಟು ಮಾಡಿತು. ಭಾರತಾದ್ಯಂತ ಜನರು ಈ ಆಜ್ಞೆಗಳನ್ನು ನಿರೋಧಿಸುವ ಸಭೆಗಳನ್ನು ನಡೆಸಿದರು.

ಇತ್ತ ಆನಿ ಬೆಸೆಂಟರಾದರೋ ಈ ಆಜ್ಞೆಗಳನ್ನು ವ್ಯಕ್ತವಾಗಿ ಉಲ್ಲಂಘಿ

ಸದಿದ್ದರೂ, ಅವನ್ನು ಗಣನೆಗೆತಾರದೆ, ತಮ್ಮ 'ಹೋಂ-ರೋಲ್' ಚಳವಳಿಯನ್ನು ತುಂಬು ಉತ್ಸಾಹದಿಂದ ಮುಂದುವರೆಸಿದರು. ಈ ಚಳವಳಿಯಿಂದಾಗಿ ಬ್ರಿಟಿಷ್ ಪ್ರಜೆಗಳು ಭಾರತ ವರ್ಷದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಬದಲಾಯಿಸಲು ಮೊದಲು ಮಾಡಿದರು. ಜೊತೆಗೆ ಭಾರತೀಯರು ಯುದ್ಧ ಕಾಲದಲ್ಲಿ ಬ್ರಿಟನ್ನಿನ ನೆರವಿಗೆ ನಿಂತು ಮಾಡಿದ ಅಪ್ರತಿಮ ಸಹಾಯ ಕೂಡ ಬ್ರಿಟಿಷ್ ಜನತೆಯ ಮೇಲೆ ತುಂಬಾ ಶುಭ ಪರಿಣಾಮವನ್ನುಂಟುಮಾಡಿತು. ತತ್ಫಲವಾಗಿ ಬ್ರಿಟನ್ನಿನ ವಿವಿಧ ರಾಜಕೀಯ ಪಕ್ಷಗಳೂ, ಪತ್ರಿಕೆಗಳೂ, ಭಾರತ ಮತ್ತು ಬ್ರಿಟನ್ನಿನ ಸಂಬಂಧವನ್ನು ಪುನರ್ನಿರ್ಮಿಸುವುದು ಅತ್ಯವಶ್ಯಕವೆಂದೂ ಇನ್ನು ಮುಂದೆ ಇಂಡಿಯಾ ಬ್ರಿಟನ್ನಿನ ಆಶ್ರಿತರಾಷ್ಟ್ರವಾಗಿರುವುದರ ಬದಲು ಬ್ರಿಟಿಷ್ ಸಾಮ್ರಾಜ್ಯದಲ್ಲಿ ಸಮಭಾಗಿಯಾಗುವಂತಾಗಬೇಕೆಂದೂ ವಾದ ಮಾಡಲಾರಂಭಿಸಿದುವು.

ಇದರಿಂದಾಗಿ ತಮ್ಮ ಸ್ವಾತಂತ್ರ್ಯ ದೊರೆಯುವ ಕಾಲ ಸನ್ನಿಹಿತವಾಯಿತೆಂಬ ಭಾವನೆ ಭಾರತೀಯರಲ್ಲಿ ಬಲಗೊಂಡಿತು. ಆದರೆ, ಸ್ವಲ್ಪ ಕಾಲ ಕಳೆಯುವುದರೊಳಗಾಗಿ ಈ ಭಾವನೆಗೆ ಬುಡವಿಲ್ಲವೆಂಬುದು ಸ್ಫುಟವಾಯಿತು. ಮಹಾಯುದ್ಧಾನಂತರ ಬಿಟ್ರಿಷ್ ಸಾಮ್ರಾಜ್ಯ ವ್ಯವಸ್ಥೆಯನ್ನು ಹೊಸರೀತಿಯಲ್ಲಿ ರೂಪಿಸಬೇಕೆಂಬ ಬಗೆಗೆ ಕೆನಡಾ, ಆಸ್ಟ್ರೇಲಿಯಾ ಮುಂತಾದ ಬ್ರಿಟಿಷ್ ಸಾಮ್ರಾಜ್ಯದ ಮುಖ್ಯ ಘಟಕಗಳ ಮಂತ್ರಿಗಳು ಮಾತನಾಡಲಾರಂಭಿಸಿದರು. ಆದರೂ, ಈ ಮಾತುಕತೆಗಳಲ್ಲಿ ಇಂಡಿಯದ ಸೊಲ್ಲೇ ಇಲ್ಲದೆ ಹೋದದ್ದು ಭಾರತೀಯರಿಗೆ ತುಂಬಾ ನಿರುತ್ಸಾಹವನ್ನುಂಟುಮಾಡಿತು ; ಇದರ ಜೊತೆಗೆ ಯುದ್ಧಾನಂತರದ ಪುನರ್‌ವ್ಯವಸ್ಥೆಯಲ್ಲಿ ಕೆನಡಾ, ಆಸ್ಟ್ರೇಲಿಯಾ ಮುಂತಾದ ಬ್ರಿಟಿಷ್ ಕಾಲೊನಿಗಳು ಬ್ರಿಟನ್ನಿನೊಡಗೂಡಿ ಇಂಡಿಯವನ್ನು ಆಳುವಂತಾಗಬಹುದೆಂಬ ಅನುಮಾನಕ್ಕೂ ಅವಕಾಶ ಕೊಟ್ಟಿತು. ಈ ಸೂಚನೆಯಂತೂ ಭಾರತೀಯರನ್ನು ತೀವ್ರವಾಗಿ ಕೆರಳಿಸಿತು.

ಈ ಸ್ಥಿತಿಯಲ್ಲಿ ಭಾರತ ಸ್ವತಂತ್ರವಾಗಬೇಕೆಂಬ ಚಳವಳಿಯನ್ನು ಚುರುಕುಗೊಳಿಸಿ, ಅದನ್ನು ದಿಟ್ಟತನದಿಂದ, ನಿಲುಗಡೆಯಿಲ್ಲದೆ ಮುಂದುವರೆಸಿದಲ್ಲದೆ ಯಾವ ಲಾಭವೂ ದೊರೆಯದೆಂದು ಮನಗಂಡ ಆನಿ ಬೆಸೆಂಟರು, ತಮ್ಮ ಹೋಂ-ರೂಲ್ ಚಳವಳಿಯನ್ನು ಇನ್ನಷ್ಟು ಬಲಪಡಿಸಿದರು. ಇಂಡಿಯಕ್ಕೆ

ಸ್ವಾತಂತ್ರ್ಯಕೊಡುವುದರ ಆವಶ್ಯಕತೆಯನ್ನು ಕುರಿತು ಭಾಷಣ, ಲೇಖನಗಳ ಸುರಿಮಳೆಯನ್ನೇ ಕರೆದರು.

ಆನಿ ಬೆಸೆಂಟರ ಈ ಚಳವಳಿಯನ್ನು ಮೊಟಕು ಮಾಡುವ ಉದ್ದೇಶ ದಿಂದ ಮದರಾಸು ಸರ್ಕಾರದವರು, "ಕಾಮನ್‌ವೀಲ್" ಪತ್ರಿಕೆಯನ್ನು ಅಚ್ಚು ಹಾಕುತ್ತಿದ್ದ ಆನಿ ಬೆಸೆಂಟರ ವಸಂತ ಮುದ್ರಣಾಲಯದಿಂದ ಐದು ಸಾವಿರ ರೂಪಾಯಿ ಜಾಮೀನು ಹಣ ಕೇಳಿ ಒಂದು ಆಜ್ಞೆ ಹೊರಡಿಸಿದರು. ಈ ಮೊದಲು ನ್ಯೂ ಇಂಡಿಯಾ ಪತ್ರಿಕೆಯಿಂದ ಕೇಳಿದಂತೆ ಈ ಬಾರಿ 'ಕಾಮನ್‌ವೀಲ್' ಪತ್ರಿಕೆಯಿಂದ ಠೇವಣಿ ಕೇಳಬಹುದಾಗಿತ್ತು. ಆದರೆ, ಮುದ್ರಣಾಲಯವೂ ತಮ್ಮ ಹೊಡೆತಕ್ಕೆ ಸಿಕ್ಕಲೆಂದೇನೋ ಸರ್ಕಾರದ ದೃಷ್ಟಿ ಈ ಬಾರಿ ಮುದ್ರಣಾಯದ ಮೇಲೆ ಬಿತ್ತು. ಪ್ರಧಾನವಾಗಿ ಬ್ರಹ್ಮಜ್ಞಾನ ಸಮಾಜಕ್ಕೆ ಸಂಬಂಧಿಸಿದ ಸಾಹಿತ್ಯವನ್ನು ಮುದ್ರಿಸುವ ವಸಂತ ಮುದ್ರಣಾ ಲಯಕ್ಕೆ ಈ ರಾಜಕೀಯ ಗೊಂದಲ ಬೇಡವೆಂದು ಆನಿ ಬೆಸಂಟರು ರಾಜ ಕೀಯ ಸಾಹಿತ್ಯವನ್ನು ಮುದ್ರಿಸುವುದಕ್ಕಾಗಿ ಬೇರೊಂದು ಮುದ್ರಣಾಲಯ ವನ್ನೇ ಸ್ಥಾಪಿಸಿದರು. ವಸಂತ ಮುದ್ರಣಾಲಯದಲ್ಲಿ ರಾಜಕೀಯ ಸಾಹಿತ್ಯ ಮುದ್ರಿಸುವುದನ್ನು ನಿಲ್ಲಿಸುವುದಾದರೆ, ಜಾಮೀನು ಹಣವನ್ನು ಹಿಂದಿರುಗಿಸು ವುದಾಗಿ, ಆಡಳಿತಕ್ಕೆ ಸಂಬಂಧಿಸಿದ ದೊಡ್ಡ ತಲೆಗಳಿಂದಲೇ ಆನಿ ಬೆಸೆಂಟರಿಗೆ ಸೂಚನೆ ಬಂದಿತ್ತಾದರೂ, ಅವರು ಹಾಗೆ ಮಾಡಿದ ಮೇಲೆ ಕೂಡ ವಸಂತ ಮುದ್ರಣಾಯದ ಠೇವಣಿ ಹಣ ಹಿಂದಕ್ಕೆ ಬರಲಿಲ್ಲ!

ಆದರೆ ಈ ಕಿರುಕುಳಗಳು ಆನಿ ಬೆಸೆಂಟರ ಕರ್ತವ್ಯನಿಷ್ಠೆಯನ್ನು ಎಷ್ಟು ಮಾತ್ರವೂ ಕುಂಠಿತಗೊಳಿಸಲಿಲ್ಲ. ಅವರ ಚಳವಳಿ ಮಹಾಪ್ರವಾಹ ದಂತೆ ನಾಡನ್ನೆಲ್ಲಾ ಆವರಿಸಿ ಹೊರಹೊಮ್ಮಿ ಬ್ರಿಟನ್ನಿನಲ್ಲಿಯೂ ಹರಿಯಿತು. ಭಾರತೀಯರ ಸ್ವಾತಂತ್ರ್ಯಾಸಕ್ತಿ ತುಂಬಾ ಪ್ರಬಲವಾಯಿತು. ಅದನ್ನು ಅದುಮಿ ಹುದುಗಿಸುವುದಾಗಲೀ ಇದಿರಿಸಿ ಬೆದರಿಸುವುದಾಗಲೀ, ಹೊಡೆದು ಕೆಡಹುವುದಾಗಲಿ ಸಾಧ್ಯವಿಲ್ಲವೆಂಬ ಭಾವನೆ ಬ್ರಿಟಿಷ್ ಆಳರಸರಲ್ಲಿ ಬಲ ಗೊಳ್ಳುತ್ತಾ ಬಂತು. ಆದ್ದರಿಂದ ಈ ಚಳವಳಿಯನ್ನು ಬೆಳೆಯಗೊಡಕೂಡ ದೆಂದೂ, ಹೇಗಾದರೂ ಮಾಡಿ ಮುರಿಯಬೇಕೆಂದೂ ಅವರು ನಿರ್ಧರಿಸಿದರು. ಆನಿ ಬೆಸೆಂಟ್‌ರವರ ಪತ್ರಿಕೆಗಳಿಂದ ಜಾಮೀನು ಹಣ ಬೇಡಿ, ಆನಿ ಬೆಸೆಂಟರ

ಮೇಲೆ ಪ್ರವೇಶ ನಿಷೇಧಾಜ್ಞೆಗಳನ್ನು ಹಾಕಿದರೆ ಅದೇನು ಪರಿಣಾಮಕಾರಿ ಯಲ್ಲವೆಂಬುದನ್ನು ಅವರು ಆಗಲೇ ಮನಗಂಡಿದ್ದರು. ಆದ್ದರಿಂದ ಈಗ ಬುಡಕ್ಕೆ ಕೊಡಲಿಯ ಪೆಟ್ಟು ಹಾಕಿ, ಒಂದು ಕೈ ನೋಡಿಯೇಬಿಡೋಣ ವೆಂದು ತೀರ್ಮಾನಿಸಿದರು. ಈ ತೀರ್ಮಾನವನ್ನು ಆಚರಣೆಗೆ ತರುವ ಹೊಣೆ ಮದರಾಸಿನ ಗೌರ್ನರ್‌ರವರಾಗಿದ್ದ ಲಾರ್ಡ್ ಪೆಂಟ್‌ಲ್ಯಾಂಡ್‌ರವರ ಪಾಲಿಗೆ ಬಿತ್ತು.

ಅವರು ತಮ್ಮ ಈ ಕೃತಿಗೆ ಪೀಠಿಕೆಯಾಗಿ ೧೯೧೭ನೇ ಮೇ ೨೪ನೇ ತಾರೀಖು ಆನಿ ಬೆಸೆಂಟರ ಮೇಲೆ ವಾಕ್-ಪ್ರಹಾರವನ್ನಾರಂಭಿಸಿದರು. ಮದರಾಸು ಶಾಸನಸಭೆಯಲ್ಲಿ ಭಾಷಣಮಾಡುತ್ತಾ ಅವರು ಹೋಂ-ರೂಲ್ ಚಳವಳಿಯನ್ನೂ ಆ ಚಳವಳಿಯ ಮೂಲ ಕರ್ತೃವಾದ ಆನಿ ಬೆಸೆಂಟರನ್ನೂ ಖಂಡಿಸಿದ್ದಲ್ಲದೆ, ಹೋಂ-ರೂಲ್ ಚಳವಳಿಯ ಧ್ಯೇಯಗಳನ್ನೊಪ್ಪಿಕೊಂಡು ಅವಕ್ಕನುಸಾರವಾಗಿ ಇಂಡಿಯಾಕ್ಕೆ ಸ್ವಾತಂತ್ರ್ಯಬೇಕೆಂದು ಸಾರಿದ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ಸಂಸ್ಥೆಗಳನ್ನೂ ಖಂಡಿಸಿದರು. ಇದಲ್ಲದೆ, ಕೇಂದ್ರ ಶಾಸನಸಭೆಯ ಹತ್ತೊಂಬತ್ತು ಮಂದಿ ಖಾಸಗೀ ಸದಸ್ಯರು ಕಾಂಗ್ರೆಸ್ ಮತ್ತು ಲೀಗ್‌ನ ಸ್ವಾತಂತ್ರ್ಯದ ಬೇಡಿಕೆ ಬೆಂಬಲ ಕೊಟ್ಟಿದ್ದನ್ನು ಲಾರ್ಡ್ ಪೆಂಟ್‌ಲ್ಯಾಂಡ್‌ರವರು ಹಿಯ್ಯಾಳಿಸಿ, ವಿದ್ಯಾವಂತ ರಾದ ಭಾರತೀಯರು ಹೆಚ್ಚು ವಿವೇಕದಿಂದ ವರ್ತಿಸಬೇಕೆಂದೂ, ಇನ್ನೂ ಕೆಲಕಾಲ ಇಂಡಿಯಾಕ್ಕೆ ಸ್ವರಾಜ್ಯದೊರೆಯುವ ಸಂಭವವಿಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವುದು ಮೇಲೆಂದೂ ಘೋಷಿಸಿದರು. ಅಷ್ಟರಿಂದಲೇ ತೃಪ್ತರಾಗದೆ ಇನ್ನೂ ಒಂದುಹೆಜ್ಜೆ ಮುಂದೆಹೋಗಿ ಈ ಸ್ವರಾಜ್ಯ ಬೇಡಿಕೆಯ ಚಳವಳಿ ಮುಂದುವರೆದರೆ, ಅದನ್ನು ಮಟ್ಟಹಾಕಲು ಸರ್ಕಾರ ಸಿದ್ಧವಿದೆ ಎಂದೂ ಹೇಳಿದರು.

ಆನಿ ಬೆಸೆಂಟರಿಗೆ ಇಂಥ ಖಂಡನೆಗಳು ಹೊಸದೇನೂ ಆಗಿರಲಿಲ್ಲ. ಅವರು ಇಂಥ ಬೆದರಿಕೆಗಳಿಗೆ ಎಂದೂ ಸೊಪ್ಪುಹಾಕಿದವರಲ್ಲ. ಆದ್ದರಿಂದ ಅವರು ಲಾರ್ಡ್ ಪೆಂಟ್‌ಲ್ಯಾಂಡ್‌ರವರ ಬೆದರಿಕೆಗಳನ್ನು ಲಕ್ಷ್ಯಿಸದೆ ತಮ್ಮ ಮೊದಲಿನ ಧೋರಣೆಯಲ್ಲೇ ಮುಂದುವರೆದರು; ಲಾರ್ಡ್ ಪೆಂಟ್‌ಲ್ಯಾಂಡ್ ರವರ ಭಾಷಣದ ವಿಮರ್ಶೆಗಾಗಿ ನ್ಯೂ ಇಂಡಿಯಾ ಪತ್ರಿಕೆಯಲ್ಲಿ ಒಂದು

ಹೊಸ ಲೇಖನ ಮಾಲೆಯನ್ನಾರಂಭಿಸಿದರು! ಆ ಭಾಷಣವನ್ನು ತೀರಾ ಪ್ರತಿಗಾಮಿ ಭಾವನೆಯಿಂದ ಕೂಡಿದ್ದೆಂದು ಖಂಡಿಸಿದರು. ಭಾರತೀಯರು ತಮ್ಮ ಸ್ವಾತಂತ್ರ್ಯಕಾಂಕ್ಷೆಯನ್ನು ಸೂಚಿಸಲು ಶಾಸನಬದ್ಧವಾದ ಚಳವಳಿ ನಡೆಸುವದನ್ನುಕೂಡ ಆ ಭಾಷಣದಲ್ಲಿ ನಿರೋಧಿಸಿರುವುದು ತೀರಾ ಹೀನಾಯ ಕರವೆಂದೂ ಟೀಕಿಸಿದರು. ಇದಲ್ಲದೆ, ಕಾಂಗ್ರೆಸಿಗರೂ ಮುಸ್ಲಿಂಲೀಗ್ ನವರೂ ಆ ಪ್ರತಿಗಾಮಿ ಭಾಷಣವನ್ನು ತೀವ್ರವಾಗಿ ಖಂಡಿಸಬೇಕೆಂದೂ, ಎಷ್ಟೇ ಅಡ್ಡಿಆತಂಕಗಳು ಬರಲಿ, ಎಂದಿನಂತೆ ತಮ್ಮ ಸ್ವರಾಜ್ಯ ಚಳವಳಿಯನ್ನು ಮುಂದುವರಿಸಬೇಕೆಂದೂ ಸೂಚಿಸಿದರು. ಪ್ರಭಾವಶಾಲಿಯಾದ ಅವರ ವಾದಸರಣಿ, ಓಜಸ್ವಿಯಾದ ಅವರ ಭಾಷಾಶೈಲಿಗಳಿಂದ ಉಜ್ವಲವಾಗಿದ್ದ ಅವರ ಲೇಖನಗಳು ಇಡೀ ರಾಷ್ಟ್ರದಮೇಲೆ ಪ್ರಬಲವಾದ ಪರಿಣಾಮವ ನ್ನುಂಟುಮಾಡಿದುವು. ನಾಡಿಗೆ ನಾಡೇ ಲಾರ್ಡ್ ಪೆಂಟ್‌ಲ್ಯಾಂಡ್‌ರ ಭಾಷಣ ವನ್ನು ಖಂಡಿಸಿತು: ಭಾರತೀಯ ಪತ್ರಿಕೆಗಳೆಲ್ಲವೂ ಆ ಭಾಷಣವನ್ನು ಕಟು ವಾಗಿ ಟೀಕಿಸಿದುವು. ಎಲ್ಲ ರಾಜಕೀಯಪಕ್ಷಗಳವರೂ ಲಾರ್ಡ್ ಪೆಂಟ್ ಲ್ಯಾಂಡರ ಭಾಷಣವನ್ನೂ ಆ ಭಾಷಣದ ಹಿನ್ನೆಲೆಯಲ್ಲಿದ್ದ ಭಾವನೆಗಳನ್ನೂ ಅಲ್ಲಗಳೆದರು.

ರಾಷ್ಟ್ರದ ರಾಜಕೀಯ ವಾತಾವರಣ ಮತ್ತೆ ಕಾವೇರಿತು! ತಮ್ಮ ಭಾಷಣಕ್ಕೆ ದೊರೆತ ಈ ತೀವ್ರ ಖಂಡನಾತ್ಮಕ ಪ್ರತಿಕ್ರಿಯೆಯಿಂದ ಉದಕ ಮಂಡಲದ ತಂಪುಹವೆಯಲ್ಲಿದ್ದ ಲಾರ್ಡ್ ಪೆಂಟ್‌ಲ್ಯಾಂಡ್‌ರವರ ರಕ್ತವೂ ಕಾದು ಕಾವೇರಿತು! ದೇಶದ ಮೇಲೆಲ್ಲಾ ತಮ್ಮ ಭಾಷಣದ ಬಗೆಗೆ ಖಂಡನೆಗಳು ಜರುಗುತ್ತಿದ್ದಾಗ, "ಉದಕಮಂಡಲಕ್ಕೆ ಬಂದು ಗೌರ್ನರ್‌ರವರನ್ನು ಕಾಣ ಬೇಕೆಂದು" ಲಾರ್ಡ್ ಪೆಂಟ್‌ಲ್ಯಾಂಡ್‌ರವರು ಆನಿ ಬೆಸೆಂಟರಿಗೆ ಸೂಚನೆ ಕಳು ಹಿಸಿದರು. ಈ ಸೂಚನೆಯಂತೆ ಆನಿ ಬೆಸೆಂಟರು ಉದಕಮಂಡಲಕ್ಕೆ ಹೋಗಬೇಕೆಂದಿರುವ ಹೊತ್ತಿಗೆ ಲಾರ್ಡ್ ಪೆಂಟ್‌ಲ್ಯಾಂಡ್‌ರವರು ೧೯೧೭ನೇ ಜೂನ್ ೧೫ನೇ ತಾರೀಖು ಶುಕ್ರವಾರ ತಾವೇ ಮದರಾಸಿಗೆ ಹಿಂದಿರುಗಿ ಬಂದರು; ಮಾರನೆಯದಿನ ಮಧ್ಯಾನ್ಹ ತಮ್ಮನ್ನು 'ಗೌರ್ನ್‌ಮೆಂಟ್ ಹೌಸ್' ನಲ್ಲಿ ಭೇಟಿಮಾಡಬೇಕೆಂದು ಆನಿ ಬೆಸೆಂಟ್‌ರವರಿಗೆ ಹೇಳಿಕಳುಹಿಸಿದರು.

ಆನಿ ಬೆಸೆಂಟ್‌ರವರು, ಅವರನ್ನು ಭೇಟಿಮಾಡಿದಾಗ ಅವರು, "ನೀವು

ನಿಮ್ಮ ರಾಜಕೀಯ ಚಟವಳಿಕೆಗಳನ್ನು ನಿಲ್ಲಿಸಿಬಿಡುವುದು ಒಳ್ಳೆಯದು" ಎಂದು ಬೆಸೆಂಟರಿಗೆ ಸೂಚಿಸಿದರು. ಅದು ಸಾಧ್ಯವಿಲ್ಲವೆಂದು ಬೆಸೆಂಟರು ಖಂಡಿತವಾಗಿ ಹೇಳಿಬಿಟ್ಟಮೇಲೆ "ಹಾಗಾದರೆ, ನಾವು ನಿಮ್ಮ ರಾಜಕೀಯ ಕಾರ್ಯಕಲಾಪಗಳನ್ನೂ ಇತರ ಕಾರ್ಯಕ್ರಮಗಳನ್ನೂ ಭಿನ್ನಭಿನ್ನ ದೃಷ್ಟಿಯಿಂದ ನೋಡುವುದು ಸಾಧ್ಯವಿಲ್ಲ. ನಿಮ್ಮ ಎಲ್ಲಾ ಕಾರ್ಯಕ್ರಮಗಳನ್ನು ತಡೆಗಟ್ಟ ಬೇಕಾಗುತ್ತದೆ" ಎಂದರು.

ಈ ಸೂಚನೆಗೆ ಪ್ರತಿಕ್ರಿಯೆಯಾಗಿ ಆನಿ ಬೆಸೆಂಟರು "ಹಾಗೆ ಮಾಡಲು ಬೇಕಾದ ಅಧಿಕಾರ ಸಂಪತ್ತಿಯೆಲ್ಲವೂ ತಮಗಿದೆ. ಈ ವಿಚಾರದಲ್ಲಿ ನಾನು ಅಸಹಾಯಕಳಾಗಿದ್ದೇನೆ. ತಮ್ಮ ಅಪೇಕ್ಷೆಯಿದ್ದಂತೆ ತಾವು ವರ್ತಿಸ ಬಹುದು. ಆದರೆ ಒಂದು ಮಾತನ್ನು ಮಾತ್ರ ನಾನು ತಮಗೆ ಹೇಳ ಬೇಕಾಗಿದೆ. ತಮ್ಮ ಈ ವ್ಯವಹರಣೆಯಿಂದ ತಾವು ಬ್ರಿಟಿಷರ ಇಂಡಿಯಾ ಸಾಮ್ರಾಜ್ಯದ ಬುಡಕ್ಕೇ ಮೃತ್ಯುಪ್ರಾಯವಾದ ಹೊಡೆತ ಕೊಡುತ್ತಿದ್ದೀರಿ. ತಾವು ಪ್ರಕೃತ ಈ ಪ್ರಾಂತದ ಗೌರ್ನರ್‌ಆಗಿ ತಮ್ಮ ಕರ್ತವ್ಯವನ್ನು ನೆರವೇರಿ ಸುತ್ತಿದ್ದೀರಾಗಿ, ವ್ಯಕ್ತಿಶಃ ನನಗೆ ತಮ್ಮ ಮೇಲೆ ಯಾವ ವಿರೋಧ ಭಾವನೆಯೂ ಇಲ್ಲವೆಂಬುದನ್ನು ಈ ಸಂದರ್ಭದಲ್ಲಿ ನಾನು ಸ್ಪಷ್ಟಪಡಿಸ ಬೇಕಾಗಿದೆ" ಎಂದರು.

ಭೇಟಿ ಮುಗಿಯಿತು. ಆನಿ ಬೆಸೆಂಟರು ಗೌರ್ನಮೆಂಟ್ ಹೌಸ್‌ನಿಂದ ಹೊರಬಿದ್ದರು. ಆ ಕ್ಷಣದಲ್ಲಿ ಅವರು ಸ್ವತಂತ್ರರಾಗಿದ್ದರಾದರೂ, ಮದರಾಸು ಸರ್ಕಾರ ತಮ್ಮನ್ನು ಹೆಚ್ಚುಕಾಲ ಸ್ವತಂತ್ರವಾಗಿರಲು ಬಿಡುವುದಿಲ್ಲವೆಂಬುದು ಅವರಿಗೆ ಖಚಿತವಾಗಿತ್ತು. ಉದಕಮಂಡಲಕ್ಕೆ ಬರಬೇಕೆಂದು ಗೌರ್ನರ್ ರವರಿಂದ ಕರೆಬಂದಾಗಲೇ ಅದನ್ನವರು ಅರಿತಿದ್ದರು ಮತ್ತು ಬಂಧನಕ್ಕೊಳ ಗಾಗಲು ಸಿದ್ಧರಾಗಿಯೇ ಇದ್ದರು. ಆದ್ದರಿಂದ ಗೌರ್ನರ್‌ರವರನ್ನು ನೋಡಲು ಹೋಗುವುದಕ್ಕೆ ಹಿಂದಿನ ದಿನವೇ ಅವರು ತಮ್ಮ "ಬೀಳ್ಕೊಡಿಕೆಯ ಸಂದೇಶ" ವನ್ನು ಬರೆದಿಟ್ಟಿದ್ದರು :

ನಾನು ಮುಚ್ಚುಮರೆಯಿಲ್ಲದೆ ಬರೆಯುತ್ತಿದ್ದೇನೆ. ಏಕೆಂದರೆ, ಸದ್ಯಕ್ಕೆ ಇದೇ ನನ್ನ ಕೊನೆಯಮಾತು. ನಾನು ಇಂಡಿಯಾದೇಶವನ್ನು ಪ್ರೀತಿಸುತ್ತೇನೆಯಾಗಿ, ಕಾಲಮಿಂಚಿಹೋಗುವಮುನ್ನ ಆ ರಾಷ್ಟ್ರವನ್ನು

ಎಚ್ಚರಿಸಲು ಹೆಣಗಿದ್ದೇನೆಯಾಗಿ, ನಾನು ವಾಗ್ಬಂಧನಕ್ಕೆ, ಸೆರೆಮನೆಯ ವಾಸಕ್ಕೆ ಗುರಿಯಾಗಿದ್ದೇನೆ. ಅನ್ಯಾಯವಾದದ್ದನ್ನು ಒಪ್ಪಿಕೊಳ್ಳುವುದಕ್ಕಿಂತ ಅನಾನುಕೂಲ್ಯಗಳನ್ನನುಭವಿಸುವುದೇ ಮೇಲು. ಮಾನವನ್ನು ಕಳೆದುಕೊಳ್ಳುವುದಕ್ಕಿಂತ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವುದೇ ಮೇಲು.

ನನಗೇನೋ ವಯಸ್ಸಾಗಿದೆ. ಆದರೆ ನಾನು ಸಾಯುವುದರೊಳಗಾಗಿ ಭಾರತವರ್ಷ ಸ್ವತಂತ್ರವಾದದ್ದನ್ನು ಕಾಣುತ್ತೇನೆಂಬ ನಂಬಿಕೆ ನನಗಿದೆ. ಆ ಉಜ್ವಲ ನಿರೀಕ್ಷೆಯನ್ನು ಕಾರ್ಯರೂಪಕ್ಕೆ ತರಲು ನನ್ನಿಂದೇನಾದರೂ ಅಲ್ಪಸ್ವಲ್ಪ ಸಹಾಯವಾಗಿದ್ದರೆ, ನಾನು ಸಂತೃಪ್ತಳು. **ದೇವರು ಭಾರತವರ್ಷವನ್ನು ರಕ್ಷಿಸಲಿ. ವಂದೇಮಾತರಂ.**

ಆನಿ ಬೆಸೆಂಟರು ಗೌರ್ನರರ ನಿವಾಸದಿಂದ ಹಿಂದಿರುಗಿ ಒಂದು ಗಂಟೆಯಾಗುವುದರೊಳಗಾಗಿ ಆನಿ ಬೆಸೆಂಟರನ್ನೂ, ಅವರ ಸಹೋದ್ಯೋಗಿಗಳಾದ ಜಿ. ಎಸ್. ಆರುಂಡೇಲ್ ಮತ್ತು ಬಿ. ಪಿ. ವಾಡಿಯಾರವರನ್ನು ಬಂಧಿಸಿದರೆಂಬ ವಾರ್ತೆ ಮದರಾಸಿನಲ್ಲೆಲ್ಲಾ ಕಾಡ್ಗಿಚ್ಚಿನಂತೆ ಹಬ್ಬಿತು; ಅದೇ ವೇಗದಲ್ಲಿ ದೇಶವನೆಲ್ಲಾ ಆವರಿಸಿತು. ಸರ್ಕಾರದ ಈ ಕಾರ್ಯಕ್ರಮ ಜನಮನದಲ್ಲಿ ತೀವ್ರವಾದ ನೋವನ್ನೂ ಜುಗುಪ್ಸೆಯನ್ನೂ ಉಂಟುಮಾಡಿತು. ಪತ್ರಿಕೆಗಳು ಸರ್ಕಾರದ ಈ ಕೃತಿಯನ್ನು ಖಂಡಿಸಿದುವು. ಆನಿ ಬೆಸೆಂಟರ ರಾಜಕೀಯ ಆದರ್ಶಗಳನ್ನೊಪ್ಪದವರು ಕೂಡ ಅವರ ಬಂಧನಕ್ಕೆ ಕಾರಣರಾದವರನ್ನು ತೆಗಳಿದರು. ಅಷ್ಟೇಅಲ್ಲ–ಅದುವರೆಗೆ ಹೋಂ–ರೂಲ್ ಚಳವಳಿಗೆ ಸೇರದೆ ದೂರನಿಂತಿದ್ದ ಹಲವರು ಭಾರತೀಯ ಮುಖಂಡರು ಬಹಿರಂಗವಾಗಿ ಚಳವಳಿಗೆ ಸೇರಿ ಅದಕ್ಕೆ ಬೆಂಬಲಕೊಟ್ಟರು. ಆನಿ ಬೆಸೆಂಟರು ನಡೆಸುತ್ತಿದ್ದ ಸಾರ್ವಜನಿಕ ಕಾರ್ಯಗಳ ಮತ್ತು ಪತ್ರಿಕೆಗಳ ನೆರವಿಗೆಂದು ನಿಧಿ ಕೂಡ ಚೆನ್ನಾಗಿ ಕೂಡಿತು. ಆನಿ ಬೆಸೆಂಟರು ಬಂಧಿತರಾದರೆಂದು ಅವರು ನಡೆಸುತ್ತಿದ್ದ ನ್ಯೂ ಇಂಡಿಯಾ ಮತ್ತು ಕಾಮನ್‌ವೀಲ್ ಪತ್ರಿಕೆಗಳು ನಿಂತುಹೋಗಲಿಲ್ಲ. ಆನಿ ಬೆಸೆಂಟರು ಪತ್ರಿಕೆಗಳ ಸಂಬಂಧವನ್ನು ಬಿಟ್ಟುಕೊಟ್ಟು ಮೂರುದಿನಗಳಾಗುವುದರೊಳಗಾಗಿ, ಬೊಂಬಾಯಿನ 'ಯಂಗ್ ಇಂಡಿಯಾ'ದ ಪಿ.ಕೆ. ಟೆಲಾಂಗ್‌ರವರು ಮದರಾಸು ಸರ್ಕಾರದಲ್ಲಿ ಎರಡುಸಾವಿರ ರೂಪಾಯಿ

ಠೇವಣಿ ಇಟ್ಟು, ನ್ಯೂ ಇಂಡಿಯಾ ಮತ್ತು ಕಾಮನ್‌ವೀಲ್ ಪತ್ರಿಕೆಗಳ ಸಂಪಾದಕ, ಮುದ್ರಕ, ಪ್ರಕಾಶಕರಾಗಿ ಘೋಷಿಸಿ ಆ ಪತ್ರಿಕೆಗಳನ್ನು ಎಂದಿನಂತೆ ಪ್ರಕಟಿಸಲಾರಂಭಿಸಿದರು; ಒಂದು ವ್ಯಕ್ತಿಯನ್ನು ಬಂಧಿಸುವುದರಿಂದಾಗಲೀ, ಒಂದು ವ್ಯಕ್ತಿಯ ಬಾಯಿಕಟ್ಟುವುದರಿಂದಾಗಲೀ ರಾಷ್ಟ್ರದ ಸ್ವಾತಂತ್ರ್ಯಾಪೇಕ್ಷೆಯನ್ನು ದಮನಮಾಡುವುದು ಸಾಧ್ಯವಿಲ್ಲವೆಂಬುದನ್ನು ಪರಿಣಾಮಕಾರಿಯಾಗಿ ತೋರಿಸಿದರು.

ಆನಿ ಬೆಸೆಂಟರೂ ಅವರ ಸಂಗಡಿಗರೂ ಉದಕಮಂಡಲದಲ್ಲಿ "ಸ್ಥಾನಬದ್ಧ"ರಾಗಿರಬೇಕೆಂದೂ, ಹೀಗೆ ಸ್ಥಾನಬದ್ಧರಾಗಿರುವ ಕಾಲದಲ್ಲಿ, ಮೊದಲು ಜಿಲ್ಲಾ ಮ್ಯಾಜಿಸ್ಟ್ರೇಟರ ಅವಗಾಹನೆಗೆ ಬರದ ಯಾವ ಕಾಗದ, ಲೇಖನ ಅಥವಾ ಇತರವಿಧವಾದ ಯಾವ ನಿರೂಪವನ್ನೂ ಅವರು ಯಾರಿಗೂ ಕಳುಹಿಸಕೂಡದು ಮತ್ತು ಯಾರಿಂದಲೂ ಪಡೆಯಕೂಡದು ಎಂದೂ ಸರ್ಕಾರದ ಆಜ್ಞೆಯಾಗಿತ್ತು.

ಈ ಆಜ್ಞೆಯಂತೆ ಆನಿ ಬೆಸೆಂಟರೂ ಅವರ ಸಂಗಡಿಗರೂ ಉದಕಮಂಡಲಕ್ಕೆ ಹೋಗಿ ಅಲ್ಲಿ ಈ ಹಿಂದೆ ಕರ್ನಲ್ ಆಲ್ಕಾಟ್‌ರವರು ಕಟ್ಟಿಸಿದ್ದ "ಗುಲಿಸ್ಥಾನ್"ಎಂಬ ಸಣ್ಣಬಂಗಲೆಯಲ್ಲಿ ಬಿಡಾರ ಮಾಡಿದರು; ಹೊರಗಿನ ಪ್ರಪಂಚದೊಡನೆ ತಮ್ಮ ಸಂಬಂಧವನ್ನು ಕಳೆದುಕೊಂಡರು !

ಈ ಬಂಧನಕ್ಕೆ ಒಳಗಾದಾಗ ಆನಿ ಬೆಸೆಂಟರ ವಯಸ್ಸು ಎಪ್ಪತ್ತು ವರ್ಷ. ಆದರೂ ಅವರ ಆರೋಗ್ಯ ಉತ್ತಮವಾಗಿತ್ತು. ತರುಣರನ್ನು ಮೀರಿಸುವ ಉತ್ಸಾಹದಿಂದ ಪ್ರತಿದಿನವೂ ದೀರ್ಘಕಾಲ ಕೆಲಸ ಮಾಡುವ, ಆಯಾಸವಿಲ್ಲವೆ ದೀರ್ಘಪ್ರಯಾಣ ಮಾಡುವ ಶಕ್ತಿ ಅವರಿಗಿತ್ತು. ಅವರ ಸಾರ್ವಜನಿಕ ಸೇವೆ ದಿನದಿನವೂ ಅವರಲ್ಲಿ ನವಚೇತನವನ್ನೂ ಕಾರ್ಯೋತ್ಸಾಹವನ್ನೂ ತುಂಬುತ್ತಿತ್ತು. ಸುಮಾರು ನಲವತ್ತು ವರ್ಷಗಳಿಂದ ಈ ರೀತಿ ತೀವ್ರ ಚಟುವಟಿಕೆಯ ಜೀವನವನ್ನು ನಡೆಸಿದ್ದ ಆನಿ ಬೆಸೆಂಟರವರಿಗೆ ಒಮ್ಮಿಂದೊಮ್ಮೆಲೇ ಸಂಘಟಿಸಿದ "ಸ್ಥಾನಬದ್ಧ" ಜೀವನ ಏನೇನೂ ಸರಿಬೀಳದೆ ಹೋಯಿತು. ಅದು ಅವರ ನರಮಂಡಲಗಳ ಮೇಲೆ ದುಷ್ಪರಿಣಾಮವನ್ನುಂಟುಮಾಡಿತು. ಜೊತೆಗೆ ಉದಕಮಂಡಲದ ಹವ ಅವರಿಗೆ ಸರಿಬೀಳದೆ ಅವರ ಆರೋಗ್ಯವನ್ನು ಕೆಡಿಸಿತು. ಹೀಗೆ ಅವರು ದೈಹಿಕ ಮಾನಸಿಕ ನೋವು

ವ್ಯಥೆಗಳಿಗೆ ಸಿಲುಕಿ ನಲುಗಿದರು. ಅಪರಿಮಿತವಾಗಿದ್ದ ಅವರ ಕಾರ್ಯ ಶಕ್ತಿ ಕುಂದಿತು. ದಿನದಿನಕ್ಕೆ ಈ ಅಶಕ್ತಿ ಹೆಚ್ಚಿತು.

ಆನಿ ಬೆಸೆಂಟರ ಬಂಧನದಿಂದ ಖತಿಗೊಂಡಿದ್ದ ಭಾರತ ಜನತೆ ಅವರ ತೀವ್ರ ಅನಾರೋಗ್ಯದ ಸುದ್ದಿ ಕೇಳಿ ಇನ್ನಷ್ಟು ರೇಗಿತು. ಅವರನ್ನು ಒಡನೆಯೇ ಬಂಧ ವಿಮುಕ್ತರನ್ನಾಗಿ ಮಾಡಬೇಕೆಂದು ರಾಷ್ಟ್ರಾದ್ಯಂತ ಪ್ರಬಲ ಚಳವಳಿ ನಡೆಯಿತು. ಈ ಚಳವಳಿ ದಿನದಿನಕ್ಕೆ ಬೆಳೆಯಿತು ; ಬಲಗೊಂಡಿತು. ಹೆಚ್ಚು ತೀವ್ರವಾಗಿ ಪ್ರಕಟಗೊಂಡಿತು.

ಇತ್ತ ಆನಿ ಬೆಸೆಂಟರ ಆರೋಗ್ಯ ಕೆಡುತ್ತಿದ್ದುದ್ದೂ, ಅತ್ತ ಹೊರಗೆ ಅವರ ಬಿಡುಗಡೆಯ ಕೂಗು ಮತ್ತು ಸ್ವರಾಜ್ಯ ಚಳವಳಿ ಏಕ ಪ್ರಕಾರವಾಗಿ ಬಲಗೊಳ್ಳುತ್ತಿದ್ದುದ್ದೂ ಆಳರಸರ ಮೇಲೆ ತಮ್ಮ ಪರಿಣಾಮುವನ್ನುಂಟು ಮಾಡಿದುವು.

ಏತನ್ಮಧ್ಯೆ ಕಾಂಗ್ರೆಸ್ ಸಂಸ್ಥೆ ಆನಿ ಬೆಸೆಂಟರನ್ನು ಮುಂದಿನ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು !

ಈ ಪರಿಸ್ಥಿತಿಯಲ್ಲಿ ಆನಿ ಬೆಸೆಂಟರನ್ನು ಬಂಧನದಲ್ಲಿಡುವುದು ಅಶುಭ ಫಲಗಳಿಗೆ ಎಡೆಮಾಡಿಕೊಡಬಹುದೆಂದೂ ಅವರಿಗೆ ತೋರಿತು. ಆದರೂ ಆನಿ ಬೆಸೆಂಟರನ್ನು ಒಡೆನೆಯೇ ಬಿಡುಗಡೆ ಮಾಡಿದರೆ, ತಾವು ಜನರ ಒತ್ತಾಯಕ್ಕೆ ಬಗ್ಗಿದಂತಾಗುವುದೆಂದೂ ಅದರಿಂದ ತಮ್ಮ ಘನತೆಗೆ ಕುಂದುಂಟಾಗುವುದೆಂದೂ ಭಾವಿಸಿದ ಆಳರಸರು ಆನಿ ಬೆಸೆಂಟರ ಅನಾರೋಗ್ಯದ ಹೊಣೆಗಾರಿಕೆ ಪೂರ್ಣವಾಗಿ ತಮ್ಮ ತಲೆಯ ಮೇಲೆ ಬೀಳದಂತೆ ಮಾಡಿಕೊಳ್ಳುವ ಉದ್ದೇಶದಿಂದ ಅವರ ಬಂಧನ ಸ್ಥಾನವನ್ನು ಉದಕಮುಂಡಲದಿಂದ ಕೊಯಮುತ್ತೂರಿಗೆ ಬದಲಾಯಿಸಿದರು. ಇದರಿಂದ ಆನಿ ಬೆಸೆಂಟರ ಆರೋಗ್ಯ ಸ್ವಲ್ಪ ಉತ್ತಮಗೊಂಡಿತು.

ಇದಿಷ್ಟರಿಂದ, ಭಾರತ ಜನತೆಗೆ ಸಮಾಧಾನವಾಗಲಿಲ್ಲ. ದೇಶಾದ್ಯಂತ ಸ್ವರಾಜ್ಯ ಚಳವಳಿ ಬೆಳೆಯಿತು. ಜೊತೆಗೆ ಪರದೇಶಿ ವಸ್ತು ಬಹಿಷ್ಕಾರ ಮತ್ತು ಸ್ವದೇಶಿ ವಸ್ತು ಪ್ರೋತ್ಸಾಹದ ಚಳವಳಿ ಬಲಗೊಂಡಿತು.

ಜನತೆಯ ಚಳವಳಿಯನ್ನು ನಿರ್ಲಕ್ಷಿಸಲು ಸಾಧ್ಯವಿಲ್ಲವೆಂದೂ, ಅದನ್ನು ತಾವು ನಿರ್ಲಕ್ಷಿಸಲು ಪ್ರಯತ್ನಿಸಿದರೂ ಅದು ತಮ್ಮನ್ನು ಬಿಡದೆ ಸುಡುವು

ದೆಂಬುದೂ ಆಳರಸರಿಗೆ ವೇದ್ಯವಾಯಿತು ! ಆನಿ ಬೆಸೆಂಟರು ಬಂಧನದಲ್ಲಿರಲಿ, ಬಂಧ ವಿಮುಕ್ತರಾಗಲೀ ಜನತೆಯ ಸ್ವಾತಂತ್ರ್ಯ ಚಳವಳಿ ಏಕ ಪ್ರಕಾರವಾಗಿ ನಡೆದೇ ನಡೆಯುವುದೆಂದೂ, ಅದು ಅಷ್ಟರ ಮಟ್ಟಿಗೆ ಪುಷ್ಟಿಗೊಂಡಿದೆ ಯೆಂಬುದೂ ಅವರಿಗೆ ಖಚಿತವಾಯಿತು. ಕೇವಲ ದಬ್ಬಾಳಿಕೆಯಿಂದ ಈ ಚಳವಳಿಯನ್ನು ಅಡಗಿಸುವುದು ಅಸಾಧ್ಯವೆಂಬುದನ್ನೂ ಅವರು ಮನಗಂಡರು. ಆ ಪರಿಸ್ಥಿತಿಯಲ್ಲಿ ಸಮರಕ್ಕಿಂತ ಸಂಧಾನವೇ ಉತ್ತಮಮಾರ್ಗವೆಂಬುದು ಅವರಿಗೆ ಮನದಟ್ಟಾಯಿತು. ಅವರು ತಮ್ಮ ಸಮರನೀತಿಯನ್ನು ಬದಲಾಯಿ ಸಿದರು. ಆಗ ಬ್ರಿಟಿಷ್ ಸರ್ಕಾರದಲ್ಲಿ ಭಾರತ ಸಚಿವರಾಗಿದ್ದ ಮಾಂಟೆಗೂ ರವರು, ತಮ್ಮ ಸರ್ಕಾರದ ಪರವಾಗಿ ಒಂದು ಘೋಷಣೆಯನ್ನು ಹೊರಡಿಸಿ, ಇಂಡಿಯಾ ದೇಶದಲ್ಲಿ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸುವುದೇ ಬ್ರಿಟಿಷ್ ಆಡಳಿತದ ಗುರಿಯೆಂದು ಸ್ಪಷ್ಟಪಡಿಸಿದರು. ಇದಲ್ಲದೆ ಇಂಡಿಯಾದ ಪ್ರಜಾ ವರ್ಗದ ಭಾವನೆಗಳನ್ನು ಸ್ವತಃ ಅರ್ಥಮಾಡಿಕೊಳ್ಳುವ ದೃಷ್ಟಿಯಿಂದ ಭಾರತ ಸಚಿವ ಮಾಂಟೆಗೊರವರೇ ಇಂಡಿಯಾದಲ್ಲಿ ಪ್ರವಾಸ ಮಾಡುವರೆಂಬ ಸುದ್ದಿಯೂ ಹೊರಬಿತ್ತು.

ಈ ಸಂಧಾನ ಕಾರ್ಯಕ್ರಮದ ಅಂಗವಾಗಿ, ೧೯೧೭ನೇ ಸೆಪ್ಟೆಂಬರ್ ೧೭ನೇ ತಾರೀಖಿನ ದಿನ ಸರ್ಕಾರದವರು ಆನಿ ಬೆಸೆಂಟರನ್ನೂ ಅವರ ಸಂಗಡಿ ಗರನ್ನೂ ಬಂಧ ವಿಮುಕ್ತರನ್ನಾಗಿ ಮಾಡಿದರು.

ಬಂಧನದಿಂದ ಹೊರಬಿದ್ದುದೇ ತಡ ಆನಿ ಬೆಸೆಂಟರು ಇಡೀ ದೇಶದಲ್ಲಿ ಸಂಚಾರವನ್ನು ಕೈಗೊಂಡು ಹೋದೆಡೆಯಲ್ಲೆಲ್ಲಾ ಭಾರತ ಸ್ವಾತಂತ್ರ್ಯವನ್ನು ಕುರಿತು ಭಾಷಣಮಾಡಿ ಸ್ವರಾಜ್ಯ ಚಳವಳಿಯನ್ನು ಬಲಪಡಿಸಿದರು. ಅವರು ಹೋದಲ್ಲೆಲ್ಲಾ ಭಾರತೀಯರು ಅವರನ್ನು ರಾಜಾರ್ಹವಾದ ರೀತಿಯಲ್ಲಿ ಸ್ವಾಗತಿಸಿ ಗೌರವಿಸಿದರು. ಸ್ಥಾನಬದ್ಧತೆಯು ಆನಿ ಬೆಸೆಂಟ್‌ರ ಮೇಲೆ ದುಷ್ಪರಿಣಾಮವನ್ನುಂಟುಮಾಡಿ, ಅವರ ಆರೋಗ್ಯವನ್ನು ಹಾಳುಮಾಡಿ, ಅವರು ಮೊದಲಿನಂತೆ ಆಯಾಸವಿಲ್ಲದೆ ದೀರ್ಘಕಾಲ ಕೆಲಸಮಾಡಲು ಸಾಧ್ಯವಿಲ್ಲದ ಹಾಗೆ ಮಾಡಿತ್ತಾದರೂ ಅವರು ಮಾಂಟೆಗೂರವರ ಇಂಡಿಯಾ ಪ್ರವಾಸದ ಬಗ್ಗೆ ಆಸಕ್ತಿವಹಿಸಿ, ಇಂಡಿಯಾಕ್ಕೆ ಸ್ವರಾಜ್ಯ ಕೊಡುವುದರ ಅವಶ್ಯಕತೆಯನ್ನು ಅವರಿಗೆ ಮನದಟ್ಟುಮಾಡುವುದಕ್ಕಾಗಿ, ತುಂಬಾ ಶ್ರಮ

ಪಟ್ಟು ದುಡಿದರು.

೧೯೧೭ನೇ ಡಿಸೆಂಬರ್ ೨೬ನೇ ತಾರೀಖಿನಿಂದ ೨೯ನೇ ತಾರೀಖಿನ ವರೆಗೆ ಕಾಂಗ್ರೆಸ್ಸಿನ ಮೂವತ್ತೆರಡನೆಯ ಅಧಿವೇಶನ ಕಲ್ಕತ್ತಾದಲ್ಲಿ ನಡೆಯಿತು. ಆನಿ ಬೆಸೆಂಟರು ಈ ಅಧಿವೇಶನದ ಆಧ್ಯಕ್ಷತೆಯನ್ನು ವಹಿಸಿ ಅಮೋಘವಾದ ಭಾಷಣಮಾಡಿದರು. ಆ ಭಾಷಣದಲ್ಲಿ ಭಾರತವರ್ಷ ಸ್ವತಂತ್ರವಾಗಿ ಏಷ್ಯಾದ ಮಹಾಪ್ರಭೆಯಾಗಿ, ಜಗತ್ತಿಗೆ ಬೆಳಕಾಗಿ, ಅನುಗ್ರಹ ಶಕ್ತಿಯಾಗಿ ಬಾಳುವುದೆಂಬ ತಮ್ಮ ನಂಬಿಕೆಯನ್ನು ವ್ಯಕ್ತಪಡಿಸಿ, ಅಂಥ ಪವಿತ್ರ ಮಾತೆಗೆ ಸೇವೆ ಸಲ್ಲಿಸೋಣ – ಮಾತುಗಳಿಂದಲ್ಲ, ಕೃತಿಯಿಂದ – ಎಂದು ಘೋಷಿಸಿದರು. ಕಲ್ಕತ್ತಾದಲ್ಲೇ ಡಿಸೆಂಬರ್ ಮೂವತ್ತು ಮೂವತ್ತೊಂದನೇ ತಾರೀಖಿನ ದಿವಸ ನಡೆದ ಮುಸ್ಲಿಂಲೀಗ್ ಅಧಿವೇಶನದಲ್ಲೂ ಭಾಗವಹಿಸಿ, ಭಾರತ ಸ್ವಾತಂತ್ರ್ಯದ ಬೇಡಿಕೆಯಲ್ಲಿ ಕಾಂಗ್ರೆಸ್ ಮುಸ್ಲಿಂಲೀಗ್‌ಗಳಲ್ಲಿ ಒಮ್ಮತವನ್ನೇರ್ಪಡಿಸಲು ಪ್ರಯತ್ನಿಸಿದರು.

ಕಾಂಗ್ರೆಸ್ ಅಧಿವೇಶನ ಮುಗಿದಮೇಲೆ, ಪ್ರವಾಸವನ್ನು ಕೈಗೊಂಡು ಬೊಂಬಾಯಿ, ಸೂರತ್, ಭರೋಚ್, ಕಾನ್ಪುರ, ಲಕ್ನೋ ಮುಂತಾದ ಮುಖ್ಯ ನಗರಗಳಿಗೆ ಭೇಟಿಕೊಟ್ಟು ಧರ್ಮ, ವಿದ್ಯಾಭ್ಯಾಸ, ಮತ್ತು ರಾಜಕೀಯ ಸುಧಾರಣೆಗಳ ವಿಚಾರವಾಗಿ ಭಾಷಣ ಮಾಡಿದರು. ಧರ್ಮ: ವಿವಿಧ ಪಂಗಡಗಳ ನಡುವಿನ ಕಾದಾಟವನ್ನು ಕೊನೆಗಾಣಿಸುವುದಕ್ಕೆ; ವಿದ್ಯಾಭ್ಯಾಸ : ಸುಸಂಸ್ಕೃತರಾದ ದಕ್ಷ ಪ್ರಜೆಗಳನ್ನು ರೂಪಿಸುವುದಕ್ಕೆ; ರಾಜಕೀಯ : ಇಂಡಿಯಾದ ಸ್ವಾತಂತ್ರ್ಯವನ್ನು ಸಾಧಿಸುವುದಕ್ಕೆ ನಿಯೋಜಿಸಲ್ಪಡಬೇಕೆಂದು ಬೋಧಿಸಿದರು. "ಆರ್ಯ ಜನಾಂಗಗಳ ತಾಯಿಯಾದ ಇಂಡಿಯಾಕ್ಕೆ ಸ್ವಾತಂತ್ರ್ಯ ಲಭಿಸಿದೊಡನೆಯೇ ನನ್ನ ರಾಜಕೀಯ ಕಾರ್ಯಕ್ರಮ ಸಹಜವಾಗಿ ಕೊನೆಗೊಳ್ಳುತ್ತದೆ. ಆ ಒಂದು ಧ್ಯೇಯಸಾಧನೆಗಾಗಿ ನಾನು ರಾಜಕೀಯ ರಂಗವನ್ನು ಪ್ರವೇಶಿಸಿದೆನು. ಆ ಧ್ಯೇಯಸಾಧನೆಯೊಡನೆ ಆ ಸಂಬಂಧವಾಗಿ ನನ್ನ ಕೆಲಸ ಮುಗಿಯುತ್ತದೆ." ಎಂದು ಘೋಷಿಸಿದರು.

೧೯೧೮ ರಲ್ಲಿ ಆನಿ ಬೆಸೆಂಟರ ರಾಜಕೀಯ ಗಮನ ಪ್ರಧಾನವಾಗಿ, ಮಾಂಟೆಗೂ – ಚೆಲ್ಮ್ಸ್‌ಫರ್ಡ್ ಸುಧಾರಣಾಸಲಹೆಗಳ ಕಡೆಗೇ ಇತ್ತು. ಭಾರತವರ್ಷ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆಯಲು ಅರ್ಹವಾಗಿದೆ

ಯೆಂದೂ, ಆ ಸ್ವಾತಂತ್ರ್ಯವು ಇಂಡಿಯಾಕ್ಕೆ ಒಡನೆಯೇ ದೊರೆಯಬೇಕೆಂದೂ ನಂಬಿದ್ದ ಆನಿ ಬೆಸೆಂಟರಿಗೆ ಆ ಸುಧಾರಣೆಯ ಸೂಚನೆಗಳು ಸಮಾಧಾನವನ್ನು ತರಲಿಲ್ಲ. ಆ ಸುಧಾರಣೆಯ ಹೆಚ್ಚಿನ ವಿವರಗಳು ಪ್ರಕಟವಾದೊಡನೆಯೇ ಆನಿ ಬೆಸೆಂಟರು ಅದನ್ನು ತೀವ್ರವಾಗಿ ಖಂಡಿಸಿದರು "ಬ್ರಿಟನ್ನು ಸೂಚಿಸುವುದಕ್ಕೆ, ಇಂಡಿಯಾ ಸಮ್ಮತಿಸುವುದಕ್ಕೆ ಎರಡಕ್ಕೂ ಅನರ್ಹವಾದ ಸುಧಾರಣೆಗಳಿವು" ಎಂದು ಟೀಕಿಸಿದರು.

ಆದರೂ ಆ ಸುಧಾರಣೆಗಳನ್ನು ಪೂರ್ಣವಾಗಿ ನಿರಾಕರಿಸುವುದಕ್ಕೂ ಅವರು ಒಪ್ಪಲಿಲ್ಲ. ಅವುಗಳಲ್ಲಿ ಸೂಕ್ತವಾದ ಬದಲಾವಣೆಗಳನ್ನು ಮಾಡಲು ಸಾಧ್ಯವಾದರೆ, ಆ ಬದಲಾವಣೆಗಳೊಂದಿನ ಈ ಸುಧಾರಣೆಗಳನ್ನು ಒಪ್ಪಬಹುದೆಂದರು.

ಆ ಸುಧಾರಣೆಗಳನ್ನು ಕುರಿತು ಚರ್ಚಿಸಲು ೧೯೧೮ ನೇ ಆಗಸ್ಟ್ ತಿಂಗಳಿನಲ್ಲಿ ಬೊಂಬಾಯಿನಲ್ಲಿ ಸೇರಿದ ಕಾಂಗ್ರೆಸ್ಸಿನ ವಿಶೇಷಾಧಿವೇಶನ ಆನಿ ಬೆಸೆಂಟರ ಈ ಸೂಚನೆಯ ಬಹ್ವಂಶವನ್ನು ಒಪ್ಪಿಕೊಂಡು ಆ ಬಗೆಗೆ ಒಂದು ನಿರ್ಣಯವನ್ನು ಅಂಗೀಕರಿಸಿತು. ಆದರೂ ಸುಧಾರಣೆಗಳನ್ನು ಸಂಪೂರ್ಣವಾಗಿ ನಿರಾಕರಿಸಬೇಕೆಂಬ ಪಕ್ಷ ದಿನದಿನಕ್ಕೆ ಬಲಗೊಂಡಿತು. ಕೆಲವು ತಿಂಗಳುಗಳ ಅನಂತರ ದೆಹಲಿಯಲ್ಲಿ ಸಮಾವೇಶವಾದ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಸುಧಾರಣೆಗಳನ್ನು ನಿರಾಕರಿಸುವ ನಿರ್ಣಯವಾಯಿತು. ಈ ನಿರ್ಣಯವೂ, ಗಾಂಧೀಜೀಯವರ ಶಾಸನಭಂಗ ಚಳವಳಿಯ ನಿರ್ಣಯವೂ ದೇಶಹಿತ ದೃಷ್ಟಿಯಿಂದ ಶುಭಕರವಲ್ಲವೆಂದು ಆನಿ ಬೆಸೆಂಟರಿಗೆ ತೋರಿತು. ಬಹುಜನರ ಅಭಿಪ್ರಾಯಕ್ಕೆ ವಿರುದ್ಧವಾಗಿ ನಡೆಯುವುದರಿಂದ ತಮ್ಮ ಜನಪ್ರಿಯತೆಗೆ ಕುಂದುಂಟಾಗುವ ಸಂಭವವಿದೆಯೆಂಬುದನ್ನು ಅವರು ಅರಿತಿದ್ದರಾದರೂ, ಸ್ವಂತ ಲಾಭಾಲಾಭದ ಪರವೆಯೇಯಿಲ್ಲದೆ ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಿದರು. ಅಷ್ಟು ಮಾತ್ರವಲ್ಲದೆ, ಸುಧಾರಣೆಯ ಪೂರ್ಣ ನಿರಾಕರಣೆಯುನ್ನು ತಳಹದಿಯನ್ನಾಗಿ ಮಾಡಿಕೊಂಡಿದ್ದ ಕಾಂಗ್ರೆಸ್ ಶಿಷ್ಟಮಂಡಲದೊಡನೆ ಇಂಗ್ಲೆಂಡಿಗೆ ಹೋಗಲು ಕೂಡ ನಿರಾಕರಿಸಿದರು.

ಈ ಸಂಬಂಧದಲ್ಲಿ ಅವರು ತಮ್ಮ ನಿಲುವನ್ನು ವಿವರಿಸುತ್ತಾ ಹೇಳಿದ ಮಾತುಗಳು ಗಮನಾರ್ಹವಾಗಿವೆ :

ಬೊಂಬಾಯಿನ ವಿಶೇಷ ಕಾಂಗ್ರೆಸ್ ಅಧಿವೇಶದದಲ್ಲಿ ಅಂಗೀಕೃತವಾದ ಬದಲಾವಣೆಗಳನ್ನೊಳಗೊಂಡ ಮಾಂಟೆಗೂ–ಚೆಲ್ಮ್ಸ್‌ಫರ್ಡ್ ಸುಧಾರಣೆಗಳನ್ನೊಪ್ಪಬೇಕೆಂಬುದು ನನ್ನ ಅಭಿಪ್ರಾಯ. ಆ ಬದಲಾವಣೆಗಳಲ್ಲಿ ಎಲ್ಲವನ್ನಲ್ಲದಿದ್ದರೂ ಹೆಚ್ಚು ಸಂಖ್ಯೆಯವನ್ನು "ಸೌಮ್ಯಪಕ್ಷ"ದವರು ಒಪ್ಪಿದ್ದಾರೆ. ಆದರೆ, ದೆಹಲಿ ಕಾಂಗ್ರೆಸ್ ನಿರಾಕರಿಸಿ ಅದನ್ನು ನಿರ್ಣಯಮಾಡಿದ್ದರಿಂದ, ನಾನು ಈ ಸುಧಾರಣೆಗಳ ಸಂಬಂಧದಲ್ಲಿ ಅಷ್ಟು ಮುಂದುವರೆಯಲು ಸಿದ್ಧಳಿಲ್ಲವಾದ್ದರಿಂದ, ನಾನು "ಅನ್ಯಳಾಗಿದ್ದೇನೆ." ಅದಕ್ಕಾಗಿ ನಾನೇನೂ ಮಾಡುವಹಾಗಿಲ್ಲ. ನಾವು ಸೂಚಿಸಿದ ಬದಲಾವಣೆಗಳನ್ನೊಳಗೊಂಡ ಸುಧಾರಣೆ ಇಂದಿನ ಸ್ಥಿತಿಯಲ್ಲಿ ಗ್ರಾಹ್ಯವೆಂದು ನನ್ನ ನಂಬಿಕೆ. ಬೊಂಬಾಯಿನ ನಿರ್ಣಯವನ್ನು ಕೈಬಿಟ್ಟು ಹೆಚ್ಚಿನ ಸುಧಾರಣೆಗಳನ್ನು ಅಪೇಕ್ಷಿಸುವುದರ ಮೂಲಕ ಸುಧಾರಣೆಯ ಪ್ರಯತ್ನಕ್ಕೆ ಅಪಾಯ ತಂದೊಡ್ಡಲು ನನಗೆ ಮನಸ್ಸಿಲ್ಲ. ಮೊದಲಿನಿಂದಲೂ ಸುಧಾರಣೆಗಳನ್ನು ನಿರಾಕರಿಸುತ್ತಿದ್ದ, ಮತ್ತು ಆ ಬಗೆಗೆ ಸಂಧಾನ ನಡೆಸಲು ಒಪ್ಪದಿದ್ದಪಕ್ಷಕ್ಕೆ ದೆಹಲಿ ಅಧಿವೇಶನದಲ್ಲಿ ವಿಜಯ ಲಭಿಸಿತು. ಆದ್ದರಿಂದ ಆ ಪಕ್ಷ ತಾನು ರಾಷ್ಟ್ರದ ಅಭಿಪ್ರಾಯವನ್ನು ಪ್ರತಿಬಿಂಬಿಸುತ್ತಿರುವುದಾಗಿ ಹೇಳಿಕೊಳ್ಳುವ ಅಧಿಕಾರ ಪಡೆದಿದೆ. ಇಂದು, ರಾಷ್ಟ್ರ, ನನಗಲ್ಲ ಅವರಿಗೆ ಬೆಂಬಲಕೊಡುತ್ತಿದೆ ಎಂಬುದನ್ನು ನಾನು ಒಪ್ಪಿಕೊಂಡರೂ ನನ್ನ ಅಭಿಪ್ರಾಯವನ್ನು ಮಾತ್ರ ಬಿಟ್ಟುಕೊಡಲಾರೆ. ಬಹುಮತ ಪಕ್ಷಗಳಲ್ಲೂ ಬದಲಾವಣೆ ಶಕ್ಯವಿದೆ. ನನ್ನ ನಿರೀಕ್ಷಣೆ ಅಂಥ ಬದಲಾವಣೆಯನ್ನವಲಂಬಿಸಿದೆ.

ಶಾಸನ ಭಂಗವನ್ನು ಆಚರಣೆಗೆ ತರಬೇಕೆಂದು ಹೇಳುವುದರಲ್ಲಿ ಗಾಂಧೀಜಿಯವರ ಸದಭಿಪ್ರಾಯ ಏನೇ ಇರಲಿ, ಅಂಥ ಕಾರ್ಯಕ್ರಮ, ಜನಸಾಮಾನ್ಯರಲ್ಲಿ ಪ್ರಚಂಡ ಉದ್ವೇಗಕ್ಕೆಡೆಕೊಡುವುದೆಂದೂ, ಅದರ ಪರಿಣಾಮವಾಗಿ ದಂಗೆ, ದೊಂಬಿ, ರಕ್ತಪಾತಗಳು ಆಗುವುದು ಖಂಡಿತವೆಂದೂ ಆನಿ ಬೆಸೆಂಟರು ಭಾವಿಸಿದ್ದರು. ಇಂಗ್ಲೆಂಡಿನಲ್ಲಿ ಅವರೇ ಭಾಗವಹಿಸಿದ್ದ ಟ್ರಫಾಲ್‌ಗರ್ ಚೌಕದ ಚಳವಳಿಯ ಅನುಭವ ಅವರಿಗೆ ಚೆನ್ನಾಗಿ

ನೆನಸಿದ್ದಿತಾಗಿ ಅವರು ಅನ್ಯಥಾ ಭಾವಿಸುವುದು ಸಾಧ್ಯವೇ ಇರಲಿಲ್ಲ. ಶಾಸನಭಂಗ ಚಳವಳಿಯು ತಾತ್ಕಾಲಿಕವಾಗಿ ನಮ್ಮ ಧ್ಯೇಯ ಸಾಧನೆಯನ್ನು ತೀವ್ರಗೊಳಿಸಬಹುದಾದರೂ, ದೂರದೃಷ್ಟಿಯಿಂದ ನೋಡಿದರೆ ಅದು ರಾಷ್ಟ್ರ ಹಿತಕ್ಕೆ ಅಪಾಯ ತರುವಂಥ ಕಾರ್ಯಕ್ರಮವೆಂಬ ನಂಬಿಕೆ ಆನಿ ಬೆಸೆಂಟರಿಗೆ ಬಲವಾಗಿತ್ತು. ಆದ್ದರಿಂದ ಅವರು, ೧೯೧೯ರ ಆರಂಭ ಭಾಗದಲ್ಲಿ ಗಾಂಧೀಜಿಯುವರನ್ನು ಅನೇಕಬಾರಿ ಕಂಡು, ಶಾಸನಭಂಗ ಚಳವಳಿಯನ್ನು ಬಿಟ್ಟು ಬಿಡುವಂತೆ ಪ್ರೇರೇಪಿಸಿದರು. ಆದರೆ ಗಾಂಧೀಜಿಯವರು ತಮ್ಮ ನಿರ್ಧಾರವನ್ನು ಬದಲಾಯಿಸಲಿಲ್ಲ. ಆನಿ ಬೆಸೆಂಟರೂ ತಮ್ಮ ನಿರ್ಧಾರವನ್ನು ಬದಲಾಯಿಸಲಿಲ್ಲ. ಅಪೂರ್ವ ಶಕ್ತಿವಂತರಾದ ಈ ಇಬ್ಬರು ವ್ಯಕ್ತಿಗಳು ಒಟ್ಟಿಗೆಸೇರಿ ಭಾರತ ಸ್ವಾತಂತ್ರ್ಯಕ್ಕೆ ದುಡಿದರೆ ಎಷ್ಟು ಒಳ್ಳೆಯದು ಎನಿಸಿತು ಜನತೆಗೆ. ಅಂಥ ಸೂಚನೆಗಳೂ ಹೊರಟವು. ಆದರೆ, ಮೂಲತಃ ಭಿನ್ನ ದೃಷ್ಟಿಯವರಾದ ಇವರಿಬ್ಬರೂ ಏಕೀಭವಿಸಿ ಭಾರತದ ರಾಜಕೀಯ ರಂಗಕ್ಕೆ ಸೇವೆಸಲ್ಲಿಸುವುದು ಸಾಧ್ಯವಾಗಲಿಲ್ಲ. ಈ ಅಸಾಧ್ಯತೆಯನ್ನು ಅವರಿಬ್ಬರೂ ಮನಗಂಡಿದ್ದರು. ಈ ವಿಚಾರವಾಗಿ ಮಾತನಾಡುತ್ತಾ ಆನಿ ಬೆಸೆಂಟರು ಒಮ್ಮೆ :

> ಗಾಂಧೀಯವರು ನನ್ನೊಡನೆ ಸೇರಿ ಕೆಲಸಮಾಡುವುದಿಲ್ಲ. ಕಷ್ಟವನ್ನು ಕೆಣಕಿ ಇದಿರಿಸಿ, ಶ್ರಮಪಟ್ಟು ದುಡಿದು ಅದನ್ನು ನಿವಾರಿಸಿಕೊಂಡು ಫಲವನ್ನು ಪಡೆಯಬೇಕೆಂಬುದು ಅವರ ಧ್ಯೇಯವಾಗಿರುವಂತೆ ತೋರುತ್ತದೆ. ಆದರೆ ಅದೇ ಧ್ಯೇಯವನ್ನು ಸಾಧಾರಣ ಪ್ರಗತಿಯ ಮಾರ್ಗದಿಂದ ಸಾಧಿಸುವುದರಲ್ಲಿ ಅವರಿಗೆ ಸುಖ, ಆನಂದಗಳಿರುವಂತೆ ತೋರುವುದಿಲ್ಲ. ಅಪ್ರತಿಮ ತ್ಯಾಗದಿಂದ ಶೀಲವನ್ನು ಬೆಳೆಸಿ ಸ್ಥಿರಗೊಳಿಸಬೇಕೆಂಬ ಪ್ರಯತ್ನ ಅವರದು. ಧ್ಯೇಯ ಸಾಧನೆಗಾಗಿ ಸಕಲವನ್ನೂ ಬಲಿದಾನ ಮಾಡುವ ತ್ಯಾಗಶೀಲತೆ ಅವರದು. ಕಾರ್ಯ ಸಾಧನೆಯ ಮಾರ್ಗಕ್ಕಿಂತ ಆತ್ಮಶಕ್ತಿಯ ಪ್ರಚೋದನೆಗೆ ಅವರು ಹೆಚ್ಚು ಬೆಲೆ ಕೊಡುತ್ತಾರೆ........ನಾನು ರಾಜಕೀಯ ರಂಗದಲ್ಲಿ ಕಂಡ, ಒಬ್ಬನೆ 'ಮಹಾತ್ಮ' ಅವರು.

ಎಂದು ಹೇಳಿದ್ದುಂಟು. ಗಾಂಧಿಜೀಯವರ ಗುಣಶೀಲಗಳನ್ನೂ ಆತ್ಮಶಕ್ತಿ

ಯನ್ನೂ ಆರಂಭಕಾಲದಲ್ಲೇ ಅವರು ಎಷ್ಟು ಸ್ಪಷ್ಟವಾಗಿ ಅರಿತ್ತಿದ್ದರೆಂಬುದನ್ನು ಈ ಹೇಳಿಕೆಯಿಂದ ಮನಗಾಣಬಹುದು.

ಆನಿ ಬೆಸೆಂಟರು ಗಾಂಧೀಜಿಯವರ ಶಕ್ತಿಯನ್ನು ಅರ್ಥಮಾಡಿಕೊಂಡಿದ್ದಂತೆ ಅವರ ಚಳವಳಿಯ ಲೋಪದೋಷಗಳನ್ನೂ ಅರ್ಥಮಾಡಿಕೊಂಡಿದ್ದರು. ಅವನ್ನು ಬಹಿರಂಗವಾಗಿ ಹೇಳಿ, ಅವುಗಳಿಂದ ರಾಷ್ಟ್ರಕ್ಕಾಗಬಹುದಾದ ಅಪಾಯವನ್ನು ತಪ್ಪಿಸಲು ಪ್ರಯತ್ನಿಸಬೇಕೆಂಬ ದೇಶ ಪ್ರೇಮ ಕೂಡ ಅವರಿಗಿತ್ತು. ಆದ್ದರಿಂದಲೇ ಅವರು ಗಾಂಧೀಜಿಯವರನ್ನು ವ್ಯಕ್ತಿಶಃ ಗೌರವಿಸಿದರೂ, ಅವರಲ್ಲಿ ಅಭಿಮಾನವುಳ್ಳವರಾಗಿದ್ದರೂ, ಅವರ ಕಾರ್ಯಕ್ರಮವನ್ನು ತೀವ್ರವಾಗಿ ವಿರೋಧಿಸಿದರು. ಕಾಲಜ್ಞಾನವುಳ್ಳವರಂತೆ:

> ಈ ಚಳವಳಿಗಳಿಂದ (ಶಾಸನಭಂಗ ಇತ್ಯಾದಿ) ಇಂಡಿಯಾದೇಶಕ್ಕೆ ಸ್ವರಾಜ್ಯ ಬಂದ ದಿನವೇ ಗಾಂಧೀಯರವರ ಜೀವನದ ಮಹತ್ತರ ಸೋಲಿನ ದಿನವಾಗಿ ಪರಿಣಮಿಸುವುದು ಖಂಡಿತ. ಏಕೆಂದರೆ ಇಂದು ಗಾಂಧೀಯವರು ಪ್ರೋತ್ಸಾಹಿಸುತ್ತಿರುವ ಕಾನೂನು ವಿರುದ್ಧ ಕಾರ್ಯಶಕ್ತಿಯೇ ಕಾನೂನನ್ನು ಲಕ್ಷ್ಯಿಸದೆ ಅದನ್ನು ಸದಾಮೀರಿ ನಡೆಯುವ ವಿಷಮಶಕ್ತಿಯಾಗಿ ರೂಪಾಂತರಹೊಂದಿ, ಸ್ವತಂತ್ರ ಭಾರತದಮೇಲೆ ತನ್ನ ದುಷ್ಟಪರಿಣಾಮವನ್ನು ಬೀರುತ್ತದೆ. ಗಾಂಧೀಯವರು ಇಂದು ತೋರಿಸಿಕೊಟ್ಟ ಮಾರ್ಗವನ್ನು ಭಾರತ ಪ್ರಜೆಗಳು ತಮ್ಮ ಸರ್ಕಾರದ ಮೇಲೆಯೇ ದುರುಪಯೋಗಮಾಡುವಂಥ ಪರಿಸ್ಥಿತಿಯುಂಟಾಗುತ್ತದೆ.

ಎಂದು ಘೋಷಿಸಿದರು.

ಆನಿ ಬೆಸೆಂಟರ ದೂರದೃಷ್ಟಿ ಎಷ್ಟು ಚುರುಕಾಗಿತ್ತು; ಅವರ ನಿರೀಕ್ಷೆ ಎಷ್ಟು ಸಹಜವಾಗಿತ್ತು. ಅವರ ದೇಶಪ್ರೇಮ ಎಷ್ಟು ಗಾಢವಾಗಿತ್ತು ಎಂಬುದನ್ನು ನಾವೀಗ ಅನುಭವದಿಂದ ಮನಗಂಡಿದ್ದೇವೆ. ಅವರು ಶಾಸನಭಂಗ ಚಳವಳಿಯನ್ನು ಟೀಕಿಸಿದಂತೆ, ಭಾರತೀಯರ ತೀವ್ರ ಕಾರ್ಯಕ್ರಮದಿಂದ ರೊಚ್ಚಿಗೆದ್ದು ತಮ್ಮ ಪಾಶವೀಬಲವನ್ನು ಪ್ರದರ್ಶಿಸಿದ ಬ್ರಿಟಿಷರನ್ನೂ ಟೀಕಿಸಿದರು. "ಬ್ರಿಟಿಷ್ ಆಡಳಿತಗಾರರು ತಾವು ಇಂದು ಕೈಗೊಂಡಿರುವ ಹಿಂಸಾತ್ಮಕ ದಬ್ಬಾಳಿಕೆಯನ್ನು ಕೈಬಿಟ್ಟು ಭಾರತವರ್ಷದ ಬಗೆಗೆ ಹೆಚ್ಚು ಕರುಣೆಯಿಂದ ನಡೆದುಕೊಂಡರೆ, ಇಂದಿನ ವಿಷಮ ವಾತಾ

ವರಣವೇ ಬದಲಾಗುತ್ತದೆ." ಎಂದು ಸೂಚಿಸಿದರು.

ಆನಿ ಬೆಸೆಂಟರ ಸೂಚನೆ, ಎಚ್ಚರಿಕೆಗಳನ್ನು ಇತ್ತ ಭಾರತೀಯರೂ ಲಕ್ಷ್ಯಿಸಲಿಲ್ಲ. ಬ್ರಿಟಿಷರೂ ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. ಪರಿಣಾಮ ವಾಗಿ–ಪಂಜಾಬಿನಲ್ಲಿ ಲಷ್ಕರೀಕಾಯದೆಗಳ ಪ್ರಯೋಗ, ಜಲಿಯನ್‌ವಾಲಾ ಬಾಗ್‌ನ ದುರಂತಕೊಲೆಗಳು ಘಟಿಸಿದುವು ; ಇಡೀ ರಾಷ್ಟ್ರವನ್ನೇ ಕ್ಷುಬ್ಧ ವಾತಾವರಣಕ್ಕೆ ತಳ್ಳಿದುವು.

ಈ ಪರಿಸ್ಥಿತಿಯಲ್ಲಿ ಅವರು "ನನ್ನಮಾತನ್ನು ಕೇಳದೆಹೋದಿರಿ. ಫಲವನ್ನನುಭವಿಸುತ್ತಿದ್ದೀರಿ. ಅನುಭವಿಸಿ" ಎಂದು ಭಾರತೀಯರನ್ನೂ ಬ್ರಿಟಿಷರನ್ನೂ ತೆಗಳಿ ತಟಸ್ಥವಾಗಿ ಕೂರಬಹುದಾಗಿತ್ತು. ಆದರೆ ಆನಿ ಬೆಸೆಂಟರು ಅಂಥ ವ್ಯಕ್ತಿಯಲ್ಲ. ಏನೇ ಕಾರಣವಿರಲಿ, ಅವರು ಎಂದೂ ಎಲ್ಲೂ ಅನ್ಯಾಯವನ್ನು ಸಹಿಸುತ್ತಿರಲಿಲ್ಲ. ಹಿಂಸೆಯನ್ನು ಸಹಿಸುತ್ತಿರಲಿಲ್ಲ. ಅವರು ಬ್ರಿಟಿಷರ ದಬ್ಬಾಳಿಕೆ ಕಾನೂನುಗಳನ್ನೂ ದಬ್ಬಾಳಿಕೆ ಕಾರ್ಯಕ್ರಮ ವನ್ನು ತೀವ್ರವಾಗಿ ಖಂಡಿಸಿದರು. ಶಾಸನ ಭಂಗಾದಿ ಚಳವಳಿಗಳನ್ನು ನಿಲ್ಲಿಸುವಂತೆ ಭಾರತೀಯರಿಗೂ ಸೂಚಿಸಿದರು. ಇಂಡಿಯಾದೇಶವನ್ನು ಹೀಗೆಯೇ ಕ್ಷುಬ್ಧಸ್ಥಿತಿಯಲ್ಲಿ ಬಿಡುವುದು ಆನಿ ಬೆಸೆಂಟರಿಗೆ ಸರಿದೋರಲಿಲ್ಲ. ಮತ್ತೆ ಸೌಮ್ಯವಾದಿ ಪ್ರಮುಖರನ್ನು ಕಲೆಹಾಕಿ, "ನ್ಯಾಷನಲ್ ಹೋಂ–ರೂಲ್ ಲೀಗ್" ಅನ್ನು ಸ್ಥಾಪಿಸಿ, ಬೊಂಬಾಯಿನ ವಿಶೇಷ ಕಾಂಗ್ರೆಸ್ ಅಧಿವೇಶನದ ನಿರ್ಣಯವನ್ನವಲಂಬಿಸಿದ ರಾಜಕೀಯ ಸುಧಾರಣೆ ಗಳನ್ನು ಆದಷ್ಟು ಶೀಘ್ರವಾಗಿ ಆಚರಣೆಗೆ ತರಲು ಪ್ರಯತ್ನಿಸಿದರು. ಆ ಉದ್ದೇಶದಿಂದ ಇಂಗ್ಲೆಂಡಿನಲ್ಲಿ ಮಾತುಕತೆಗಳನ್ನುಕೂಡ ನಡೆಸಿದರು. ಸುಧಾರಣೆಯ ಸಂಬಂಧವಾಗಿ ಜಂಟಿ ಪಾರ್ಲಿಮೆಂಟರಿ ಸಮಿತಿಯಮುಂದೆ, ಹೇಳಿಕೆ ಕೊಟ್ಟು, ಪ್ರಶ್ನೆಗಳಿಗೆ ಉತ್ತರಹೇಳಿ, ಸೂಚಿತ ಸುಧಾರಣೆಗಳಲ್ಲಿ ಅನೇಕ ತಿದ್ದುಪಡಿಗಳು ಅವಶ್ಯಕವೆಂಬುದನ್ನು ಸಮಿತಿಯವರಿಗೆ ಸ್ಪಷ್ಟ ಪಡಿಸಿದರು. ಮಾಂಟಿಗೂರವರು ಆನಿ ಬೆಸೆಂಟರ ಅಭಿಪ್ರಾಯಗಳನ್ನು ಒಪ್ಪಿ ಅವರನ್ನು ಗೌರವಿಸಿದರು.

ಈ ಕಾಲದಲ್ಲಿ ಆನಿ ಬೆಸೆಂಟರ ಕಾರ್ಯಕ್ರಮ, ಶಾಸನಭಂಗ, ಅಸಹ ಕಾರಗಳ ಕಾರ್ಯನೀತಿಯನ್ನೊಪ್ಪಿದ ಕಾಂಗ್ರೆಸ್ ಕಾರ್ಯಕ್ರಮದಿಂದ

ಭಿನ್ನವಾಗಿದ್ದರೂ ಅವರು ಕಾಂಗ್ರೆಸ್ಸಿನ ಸಂಬಂಧವನ್ನು ಪೂರ್ಣವಾಗಿ ಕತ್ತರಿಸಿಕೊಳ್ಳಲಿಲ್ಲ. ಭಾರತೀಯ ಸ್ವಾತಂತ್ರ್ಯ ಸಾಧನೆಗೆ ಅದು ಅಮೌಲ್ಯವಾದ ಸಂಸ್ಥೆಯೆಂದು ಅವರು ನಂಬಿದ್ದರು. ಆದ್ದರಿಂದ ಅವರು ಇಂಗ್ಲೆಂಡಿನಿಂದ ಸಕಾಲಕ್ಕೆ ಹಿಂದಿರುಗಿಬಂದು ಅಮೃತಸರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದರು. ಈ ಅಧಿವೇಶನದಲ್ಲಿಕೂಡ ಸುಧಾರಣೆಗಳ ನಿರಾಕರಣೆ ನಡೆಯಿತು. ಅಸಹಕಾರವು ಕಾಂಗ್ರೆಸ್ಸಿನ ಕಾರ್ಯನೀತಿಯಾಯಿತು.

ಈ ಅಧಿವೇಶನ ನಡೆದ ಕೆಲವು ತಿಂಗಳಗಳೊಳಗಾಗಿ, ರಾಜಕೀಯ ಸುಧಾರಣೆಗಳನ್ನು ಆಚರಣೆಗೆ ತರುವ ಬಗೆಗೆ ಪ್ರಾಥಮಿಕ ಕಾರ್ಯಗಳು ಆರಂಭವಾಗಲಿತ್ತು. ಕಾಂಗ್ರೆಸ್ ಅಸಹಕಾರವನ್ನು ನಿರ್ಧರಿಸಿತ್ತು. ಈ ಪರಿಸ್ಥಿತಿ ಎಂತೆಂಥ ದುಃಖದಾಯಕವಾದ ಘಟನೆಗಳಿಗೆ ಎಡೆಗೊಡುವುದೋ ಎಂಬ ಕಾತರ ಆನಿ ಬೆಸೆಂಟ್‌ರವರಿಗೆ ಇತ್ತು. ಆದ್ದರಿಂದ ಈ ಪರಿಸ್ಥಿತಿಯಲ್ಲಿ ಇಂಡಿಯಾವನ್ನು ಬಿಟ್ಟು ವಿದೇಶಗಳಿಗೆ ಹೋಗುವುದು ಒಳಿತಲ್ಲವೆಂದು ಅವರು ನಿರ್ಧರಿಸಿ ಇಲ್ಲಿಯೇ ನಿಂತರು. ಯೂರೋಪಿನಲ್ಲಿ ತಮಗಿದ್ದ ಮುಖ್ಯವಾದ ಕಾರ್ಯಕ್ರಮಗಳನ್ನು ರದ್ದುಪಡಿಸಿ ಇಂಡಿಯಾದಲ್ಲಿ ನಿಂತರು. ಈ ಸಂಬಂಧದಲ್ಲಿ ಅವರು ಬರೆದ ಮಾತುಗಳನ್ನು ನೀವು ನೆನೆಪಿಗೆ ತಂದುಕೊಳ್ಳಬಹುದಾಗಿದೆ :

> ನಾನು ಯೂರೋಪ್ ಪ್ರವಾಸವನ್ನು ಕೈಗೊಳ್ಳುವುದು ಸಾಧ್ಯವಿಲ್ಲವಾಗಿ ಬ್ರಹ್ಮಜ್ಞಾನ ಸಮಾಜದ ಜಗತ್-ಸಮ್ಮೇಳನವನ್ನು ಮುಂದಕ್ಕೆ ಹಾಕಲಾಯಿತೆಂದು ನನಗೆ ಸುದ್ದಿ ಬಂದಿದೆ. ಸಮ್ಮೇಳನದ ಕಾರ್ಯಕರ್ತರಿಗೆ ಇದರಿಂದ ಉಂಟಾದ ಅನಾನುಕೂಲಕ್ಕಾಗಿ ನಾನು ಮರುಗುತ್ತೇನೆ. ಆದರೆ ನಾನು ಈಗ ಇಲ್ಲಿನ ತೀವ್ರಗಾಮಿಗಳಿಗೆ ತಡೆಗೈ ಆಗಿದ್ದೇನೆಯಾಗಿ ಪ್ರಕೃತ ಸ್ಥಿತಿಯಲ್ಲಿ ಇಂಡಿಯಾ ದೇಶವನ್ನು ಬಿಟ್ಟು ಬರುವುದು ಕಡುಮೂರ್ಖತನವೂ, ಹೇಡಿತನವೂ, ಆದೀತು. ಇಂಡಿಯಾ ಮತ್ತು ಬ್ರಿಟನ್ನಿನ ನಡುವೆ ಸೌಹಾರ್ದ ಬೆಳೆಸುವುದು ಅವಶ್ಯಕ ಮತ್ತು ಪ್ರಯೋಜನಕಾರಿಯೆಂದು ನಂಬಿರುವರು, ಆ ಸೌಹಾರ್ದ ಕೆಡುವ ಸಂಭವವಿರುವ ಇಂದಿನ

ಸಂದರ್ಭದಲ್ಲಿ ಅಂಥ ಅಪಾಯಕ್ಕೆ ಎಡೆಯಾಗದಂತೆ ನೋಡಿಕೊಳ್ಳಲು ತಮ್ಮ ಪ್ರಭಾವವನ್ನು ಉಪಯೋಗಿಸುವ ದಿಟ್ಟತನವನ್ನು ತೋರಬೇಕು.

ಆನಿ ಬೆಸೆಂಟರು ಆ ದಿಟ್ಟತನವನ್ನು ತೋರಿದರು. ಇತ್ತ ರಾಜಕೀಯ ಸುಧಾರಣೆಗಳು ಆಚರಣೆಗೆ ಬರಲು ತಮ್ಮಿಂದಾದ ಎಲ್ಲ ನೆರವನ್ನೂ ಕೊಟ್ಟರು. ಅಸಹಕಾರ ಮತ್ತು ಕಿಲಾಫತ್ ಚಳವಳಿಯಲ್ಲಿ ಭಾಗವಹಿಸಿದ ಆಲಿ ಸಹೋದರರ ಬಿಡುಗಡೆಗಾಗಿ ಸುಧಾರಿತ ಶಾಸನ ಸಭೆಗಳ ಮೂಲಕ ಪ್ರಯತ್ನಿಸಿದರು. ಸುಧಾರಣೆಗಳಿಂದ ಇಂಡಿಯಾಕ್ಕೆ ಪೂರ್ಣ ಸ್ವರಾಜ್ಯ ಲಭಿಸಲಿಲ್ಲವಾದರೂ, ಆ ಪೂರ್ಣ ಸ್ವರಾಜ್ಯವನ್ನು ಗಳಿಸಿಕೊಳ್ಳಲು ಸಾಧ್ಯವಾಗುವಷ್ಟು ಅವಕಾಶ ಈ ಸುಧಾರಣಾ ಯೋಜನೆಯಲ್ಲಿದೆಯೆಂದೂ ಆದ್ದರಿಂದ ಅದನ್ನು ನಿರಾಕರಿಸದೆ, ಒಪ್ಪಿಕೊಂಡು, ಅದನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುವುದರಲ್ಲಿ ಲಾಭವಿದೆಯೆಂದೂ ಮೇಲಿಂದ ಮೇಲೆ ವಾದಿಸಿದರು. ಸುಧಾರಣೆಗಳೊಡನೆ ಸಹಕರಿಸದೆ ಇರುವುದರಿಂದ ಇಂಡಿಯಾಕ್ಕೆ ನಷ್ಟವೇ ಹೊರತು ಲಾಭವಿಲ್ಲವೆಂಬುದು ಆನಿ ಬೆಸೆಂಟ್‌ರವರ ಖಚಿತವಾದ ಅಭಿಪ್ರಾಯವಾಗಿತ್ತು. ಸುಧಾರಣೆಗಳು ಆಚರಣೆಗೆ ಬಂದಾಗ ಈ ಅಭಿಪ್ರಾಯಕ್ಕೆ ಕಾಂಗ್ರೆಸ್ಸಿನಲ್ಲಿ ವಿರೋಧ ಬಲವಾಗಿದ್ದರೂ, ಸುಧಾರಣೆಗಳನ್ನು ಪೂರ್ಣವಾಗಿ ನಿರಾಕರಿಸಿ, ಅಸಹಕಾರ ಹೂಡಿದ್ದು ನಿರೀಕ್ಷಿಸಿದಷ್ಟು ಪರಿಣಾಮ ಕಾರಿಯಾಗಲಿಲ್ಲವೆಂಬ ಭಾವನೆ ಕ್ರಮಕ್ರಮವಾಗಿ ಕಾಂಗ್ರೆಸಿಗರಲ್ಲಿಯೂ ಬಲಗೊಂಡಿತು. ಆಡಳಿತವನ್ನು ವಹಿಸಿಕೊಳ್ಳುವ ದೃಷ್ಟಿಯಿಂದಲ್ಲದಿದ್ದರೂ, ಆಡಳಿತವನ್ನು ವಿರೋಧಿಸುವ ದೃಷ್ಟಿಯಿಂದಾದರೂ, ಕಾಂಗ್ರೆಸಿಗರು ಶಾಸನ ಸಭೆಗಳನ್ನು ಪ್ರವೇಶಿಸಬೇಕೆಂದು ಚಿತ್ತರಂಜನ್ ದಾಸ್, ಮೋತಿಲಾಲ್ ನೆಹ್ರೂ ಮುಂತಾದ ಕಾಂಗ್ರೆಸ್ ಪ್ರಮುಖರು ನಿರ್ಣಯಿಸಿದರು. ಈ ನಿರ್ಣಯಾನುಸಾರ ಕಾಂಗ್ರೆಸ್ಸಿನಲ್ಲಿ 'ಸ್ವರಾಜ್ಯವಾದಿ'ಗಳೆಂಬ ಸಹಕಾರಿಗಳ ಪಕ್ಷ ಹುಟ್ಟಿ ಬೆಳೆಯಿತು. ತಾವು ಯಾವ ಶಾಸನ ಸಭೆಗಳನ್ನು ಬಹಿಷ್ಕರಿಸಿದ್ದರೂ ಆ ಶಾಸನ ಸಭೆಗಳನ್ನೇ ಕಾಂಗ್ರೆಸಿಗರು ಪ್ರವೇಶಿಸಿದರು. ಪೂರ್ಣ ಅಸಹಕಾರಕ್ಕಿಂತ, ಸತತ ವಿರೋಧ ಹೆಚ್ಚು ಪರಿಣಾಮಕಾರಿಯೆಂಬುದನ್ನು ಅವರು ಮನಗಂಡರು.

ಕಾಂಗ್ರೆಸಿಗರಲ್ಲಿ ಈ ಬದಲಾವಣೆಯುಂಟಾದುದು ಆನಿ ಬೆಸೆಂಟರ ಮನಸ್ಸಿಗೆ ಸ್ವಲ್ಪ ಸಮಾಧಾನವನ್ನುಂಟುಮಾಡಿತು.

ಕಾಂಗ್ರೆಸ್ಸಿನವರು ಮತ್ತು ಇತರ ರಾಜಕೀಯ ಪಕ್ಷದವರು ಯಾವ ಕಾರ್ಯಕ್ರಮವನ್ನು ಬೇಕಾದರೂ ಅನುಸರಿಸುತ್ತಿರಲಿ, ತಾವು ಮಾತ್ರ ತಮಗೆ ಸರಿದೋರಿದ ರಾಜಕೀಯ ಮಾರ್ಗವನ್ನು ಅನುಸರಿಸುವುದು ಆನಿ ಬೆಸೆಂಟರ ನೀತಿಯಾಗಿತ್ತು. ಅದಕ್ಕೆ ಬೆಂಬಲ ಸಿಗಲಿ, ಸಿಗದಿರಲಿ, ಅವರು ತಮ್ಮ ನಿಶ್ಚಿತಮಾರ್ಗದಲ್ಲಿ ನಿಲ್ಲದೆ ಮುಂದುವರೆಯುತ್ತಿದ್ದರು.

ಮಾಂಟೆಗೂ – ಚೆಲ್ಮ್ಸ್‌ಫರ್ಡ್ ಸುಧಾರಣೆಗಳು ಆಚರಣೆ ಬಂದಮೇಲೆ ಆನಿ ಬೆಸೆಂಟರು ಮುಂದಿನ ಕಾರ್ಯಕ್ರಮಕ್ಕೆ ಮನಸ್ಸು ಕೊಟ್ಟರು.

ಈ ಸುಧಾರಣೆಗಳಿಂದ ಭಾರತವರ್ಷಕ್ಕೆ ಸ್ವಾತಂತ್ರ್ಯಸಿಗಲಿಲ್ಲವಾದರೂ ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುವುದು ಅವಶ್ಯಕವೆಂಬ ವಿಚಾರದಲ್ಲಿ ಆಳರಸರ ಚರ್ಚೆಗಳು ನಿಂತು ಹೋದುವು. ಭಿನ್ನಾಭಿಪ್ರಾಯವಿದ್ದುದೆಲ್ಲಾ– ಈ ಸ್ವಾತಂತ್ರ್ಯವನ್ನು ಇಂಡಿಯಾಕ್ಕೆ ವಹಿಸಿಕೊಡುವ ವಿಚಾರವಾಗಿ ಮಾತ್ರ.

ಆನಿ ಬೆಸೆಂಟರು ಈ ಕ್ರಮವನ್ನು ನಿರ್ಧರಿಸುವ ಪ್ರಯತ್ನಕ್ಕೆ ಕೈಹಾಕಿದರು. ಸ್ವರಾಜ್ಯ ಪಡೆಯುವ ಹಕ್ಕು ಭಾರತೀಯರದಾದರೆ, ತಾವು ಅನುಭವಿಸುವ ಸ್ವರಾಜ್ಯದ ಸ್ವರೂಪ ಹೇಗಿರಬೇಕೆಂಬುದನ್ನು ನಿರ್ಣಯಿಸುವ ಅಧಿಕಾರವೂ ಅವರಿಗಿರಬೇಕು ಎಂಬ ವಾದವನ್ನವರು ಮುಂದುವರಿಸಿ, ಇಂಡಿಯದ ರಾಜಕೀಯ ಸಂಪ್ರದಾಯ, ಸ್ಥಿತಿಗತಿಗಳು, ಪದ್ಧತಿಗಳು ಇವನ್ನು ಗಮನದಲ್ಲಿಟ್ಟುಕೊಂಡು ಭಾರತೀಯರೇ ತಮ್ಮ ಸ್ವರಾಜ್ಯದ ರೂಪರೇಷೆಗಳನ್ನು ನಿರ್ಣಯಿಸತಕ್ಕದ್ದು ಅವಶ್ಯಕವೆಂದು ಪ್ರಚಾರಮಾಡಿದರು.

ಈ ಭಾವನೆಯನ್ನೇ ತಳಹದಿಯನ್ನಾಗಿಟ್ಟುಕೊಂಡು ಸ್ವತಂತ್ರ ಭಾರತಕ್ಕೊಂದು ರಾಜ್ಯಾಂಗವನ್ನು ಸಿದ್ಧಗೊಳಿಸುವ ಪ್ರಯತ್ನವನ್ನವರು ಕೈಗೊಂಡರು. ಭಾರತ ರಾಜಕೀಯರಂಗದ ಕೆಲವು ಪ್ರಮುಖ ವ್ಯಕ್ತಿಗಳು ಈ ಪ್ರಯತ್ನವನ್ನು ಅಪ್ರಯೋಜಕವೆಂದು ಕಡೆಗಣಿಸಿದರು. ಇನ್ನು ಕೆಲವರು ವ್ಯಕ್ತಿ ದ್ವೇಷದಿಂದ ಆ ಪ್ರಯತ್ನದಲ್ಲಿ ಸಹಕರಿಸದೆ ನಿರಾಕರಿಸಿದರು. ಆದರೆ ಆನಿ ಬೆಸೆಂಟರು ಈ ಅಲಕ್ಷ್ಯ ನಿರಾಕರಣೆಗಳಿಂದ ಎದೆಗುಂದಲಿಲ್ಲ. ತಮ್ಮ ಯೋಜನೆಯನ್ನು ತಾವು ಮುಂದುವರಿಸಿದರು. ಸುದೈವದಿಂದ

ಸರ್ ತೇಜ್‌ಬಹದೂರ್ ಸಪ್ರೂರವರಂಥ ಸ್ವತಂತ್ರ ರಾಜಕಾರಣಿಗೆ ಆನಿ ಬೆಸೆಂಟರ ಪ್ರಯತ್ನ ಹಿಡಿಸಿತು. ಅವರೂ ಆನಿ ಬೆಸೆಂಟರೂ ಸೇರಿ ಆಲೋಚಿಸಿ, ಬ್ರಿಟಿಷರ ಕೈವಾಡವಿಲ್ಲದೆ, ಭಾರತೀಯರೇ ಸ್ವತಂತ್ರವಾಗಿ ಒಂದು ರಾಜ್ಯಾಂಗವನ್ನು ಸಿದ್ಧಗೊಳಿಸುವ ಉದ್ದೇಶದಿಂದ ಒಂದು ಸರ್ವಪಕ್ಷ ಸಮ್ಮೇಳನವನ್ನು ಕರೆಯಲು ನಿರ್ಧರಿಸಿದರು.

ಈ ಸಮ್ಮೇಳನ ೧೯೨೪ ರಲ್ಲಿ ನವದೆಹಲಿಯಲ್ಲಿ ಸಮಾವೇಶವಾಗಿ 'ಕಾಮನ್‌ವೆಲ್ತ್ ಆಫ್ ಇಂಡಿಯಾ ಬಿಲ್' ಎಂಬ ಭಾರತ ಸ್ವಾತಂತ್ರ್ಯ ಮಸೂದೆಯನ್ನು ರಚಿಸಲು ನಿರ್ಣಯಿಸಿತು. ಈ ಸಭೆಯಲ್ಲಿ ಚುನಾಯಿತ ಶಾಸನ ಸಭಾಸದಸ್ಯರು ರಾಜಕೀಯ ಸಂಘಸಂಸ್ಥೆಗಳ ಪ್ರತಿನಿಧಿಗಳು, ಮುಂತಾಗಿ ೨೫೮ ಮಂದಿ ಸದಸ್ಯರಿದ್ದು ಇದು ನಿಜವಾಗಿ ಭಾರತೀಯ ರಾಜ್ಯಾಂಗ ರಚನಾಸಭೆ (ಕಾನ್ಸ್‌ಟಿಟ್ಯೂಯಂಟ್ ಅಸೆಂಬ್ಲಿ)ಯೇ ಆಗಿತ್ತು. ಈ ಸಭೆಯ ವಿವಿಧ ಉಪಸಮಿತಿಗಳು ಒಂದು ವರ್ಷಕಾಲ ಕೆಲಸಮಾಡಿ ತಮ್ಮ ತಮ್ಮ ಶಾಖೆಯ ವರದಿಯನ್ನು ಸಿದ್ಧಗೊಳಿಸಿದಮೇಲೆ ಈ ವರದಿಯನ್ನು ಆಧಾರವನ್ನಾಗಿಟ್ಟುಕೊಂಡು ಸಭೆ ಮಸೂದೆಯ ಕರಡನ್ನು ಸಿದ್ಧಗೊಳಿಸಿತು. ಸಿ. ಪಿ. ರಾಮಸ್ವಾಮಿ ಅಯ್ಯರ್, ಬೆನಗಲ್ ಶಿವರಾಯರು, ಶ್ರೀರಾಮ್, ಯದುನಂದನ ಪ್ರಸಾದ್ ಮತ್ತು ಆನಿ ಬೆಸೆಂಟರನ್ನು ಸದಸ್ಯರನ್ನಾಗುಳ್ಳ ಮಸೂದಾ ರಚನಾ ಸಮಿತಿಯು ಕರಡನ್ನು ಪರಿಶೀಲಿಸಿ, ಅದರಲ್ಲಿ ಅವಶ್ಯಕವಾದ ಶಬ್ದಾಂತರಗಳನ್ನು ಮಾಡಿ ಮಸೂದೆಯ ಪ್ರತಿಯನ್ನು ಸಿದ್ಧಗೊಳಿಸಿ ಪ್ರಕಟಿಸಿತು.

ಇಂಥ ಸಭೆಯನ್ನು ಸೇರಿಸಬೇಕೆಂಬ ಅಭಿಪ್ರಾಯ ತಮ್ಮ ಮನಸ್ಸಿನಲ್ಲಿ ಮೂಡಿದಂದಿನಿಂದ ಮಸೂದೆಯ ಪ್ರತಿ ಸಿದ್ಧವಾಗುವವರೆವಿಗೂ ಆನಿ ಬೆಸೆಂಟರು ಸಭೆಯ ಕಾರ್ಯದರ್ಶಿಯಾಗಿ ಅಪ್ರತಿಮ ಶ್ರದ್ಧೆಯಿಂದ, ಆಸಕ್ತಿಯಿಂದ ಕೆಲಸಮಾಡಿದರು.

ಈ ರಾಜ್ಯಾಂಗ ಮಸೂದೆ ಪೂರ್ಣವಾಗಿ, ರಾಷ್ಟ್ರದ ಪ್ರತಿನಿಧಿಗಳಾದ ಭಾರತೀಯರಿಂದ ಭಾರತ ವರ್ಷಕ್ಕಾಗಿ ಸಿದ್ಧಗೊಳಿಸಲ್ಪಟ್ಟುದಾದರೂ, ಕಾಂಗ್ರೆಸ್ ಮಾತ್ರ ಈ ಮಸೂದೆಯ ರಚನೆಯಲ್ಲಿ ಕೈಹಾಕದೆ ದೂರ ಉಳಿದುಬಿಟ್ಟಿತು. ಈ ಮಹಾ ಸಂಸ್ಥೆಯ ನೆರವು ಪಡೆಯಲು ಆನಿ ಬೆಸೆಂಟರು

ಪ್ರಯತ್ನ ಪಡಲಿಲ್ಲವೆಂದಲ್ಲ. ಮಸೂದೆಯ ರಚನೆಯ ಒಂದೊಂದು ಘಟ್ಟದಲ್ಲಿಯೂ ಅವರು ಗಾಂಧೀಜಿ, ಚಿತ್ತರಂಜನ ದಾಸ್, ಮೋತೀಲಾಲ್ ನೆಹ್ರೂ ಮುಂತಾದ ಕಾಂಗ್ರೆಸ್ ನಾಯಕರನ್ನು ಕಂಡು ಮಸೂದೆಯ ರಚನೆಗೆ ಅವರ ಬೆಂಬಲವನ್ನೂ ಸಹಕಾರವನ್ನೂ ಕೋರಿದರು. ಆದರೆ ಮಾಂಟಿಗೂ ಚೆಲ್ಮ್ಸ್‌ಫರ್ಡ್ ಸುಧಾರಣೆಗಳ ಸಂಪೂರ್ಣ ನಿರಾಕರಣೆ ತಾವು ನಿರೀಕ್ಷಿಸಿದಷ್ಟು ಪರಿಣಾಮಕಾರಿಯಾಗಲಿಲ್ಲವೆಂಬುದನ್ನು ಗಮನಿಸಿದ್ದ ಈ ಕಾಂಗ್ರೆಸ್ ನಾಯಕರು, ಆಗ ಶಾಸನ ಸಭಾ ಪ್ರವೇಶ ಪ್ರಯತ್ನದಲ್ಲಿ ತೊಡಗಿದ್ದರಾಗಿ, ಆನಿ ಬೆಸೆಂಟರ ರಾಜ್ಯಾಂಗ ಶಾಸನ ಮಸೂದೆಯ ರಚನೆಯಲ್ಲಿ ಆಸಕ್ತರಾಗಲಿಲ್ಲ.

ಹೀಗೆ, ಮಸೂದೆಗೆ ಕಾಂಗ್ರೆಸ್ ಪಕ್ಷದ ಒಪ್ಪಿಗೆ ದೊರೆಯದೆಹೋಯಿತಾದರೂ ಆನಿ ಬೆಸೆಂಟರು ಆ ಮಸೂದೆಯನ್ನು ತೆಗೆದುಕೊಂಡು ೧೯೨೫ನೇ ಜೂಲೈನಲ್ಲಿ ಇಂಗ್ಲೆಂಡಿಗೆ ಹೋದರು. ಅದನ್ನು ಸರ್ಕಾರಿ ಮಸೂದೆಯನ್ನಾಗಿ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಚರ್ಚೆಗೆ ತರಬೇಕೆಂದು ಪ್ರಯತ್ನಿಸಿದರು. ಆಗ ಇಂಗ್ಲೆಂಡಿನ ಮುಖ್ಯ ಮಂತ್ರಿಗಳಾಗಿದ್ದ ಕೂಲಿಕಾರರ ಪಕ್ಷದ ನಾಯಕ ರ್ಯಾಮ್‌ಸೆ ಮ್ಯಾಕ್ಡೊನಾಲ್ಡ್‌ರವರು ಭಾರತಕ್ಕೆ ಸ್ವಾತಂತ್ರ್ಯ ಕೊಡುವ ಬಗ್ಗೆ ವಿರೋಧಿಗಳಾಗಿರಲಿಲ್ಲವಾದರೂ, ಈ ಮಸೂದೆಗೆ ಲಿಬರಲ್ ಪಕ್ಷದ ಬೆಂಬಲ ದೊರೆಯುವುದೆಂಬ ನಂಬಿಕೆಯಿಲ್ಲದ್ದರಿಂದ, ಅದನ್ನು ಸರ್ಕಾರಿ ಮಸೂದೆಯನ್ನಾಗಿ ಮಂಡಿಸಲು ಸಮ್ಮತಿಸಲಿಲ್ಲ. ಆನಿ ಬೆಸೆಂಟರು ಇದರಿಂದ ಅಧೀರರಾಗದೆ, ಲೇಬರ್ ಸದಸ್ಯ ಜಾರ್ಜ್ ಲ್ಯಾನ್ಸ್‌ಬರಿಯವರ ನೆರವು ಪಡೆದು ಅದನ್ನು ಖಾಸಗೀ ಸದಸ್ಯರ ಮಸೂದೆಯಾಗಿ ೧೯೨೫ನೇ ಡಿಸೆಂಬರ್‌ನಲ್ಲಿ ಪಾರ್ಲಿಮೆಂಟಿನ ಮುಂದೆ ತಂದರು. ಆ ಸಭೆಯಲ್ಲಿ ಮಸೂದೆಗೆ ಪ್ರಥಮ ವಾಚನ ದೊರೆತು, ಅದು ಮುಂದವರಿಯದೆ ಅಷ್ಟಕ್ಕೇ ನಿಂತು ಹೋಯಿತು. ಆ ಮಸೂದೆಯನ್ನು ಮತ್ತೆ ಪಾರ್ಲಿಮೆಂಟಿನ ಚರ್ಚೆಗೆ ತರಬೇಕೆಂಬುದು ಆನಿ ಬೆಸೆಂಟರ ಅಭಿಪ್ರಾಯವಾಗಿತ್ತು. ಏತನ್ಮಧ್ಯೆ ಮಸೂದೆಗೆ ಕಾಂಗ್ರೆಸ್ಸಿನ ಸಮ್ಮತಿ ದೊರೆತರೆ ಅಖಿಲ ಭಾರತದ ಬೆಂಬಲವುಳ್ಳ ಆ ಮಸೂದೆಯನ್ನು ಶಾಸನವಾಗಿ ಒಪ್ಪುವಂತೆ ಪಾರ್ಲಿಮೆಂಟನ್ನು ಒತ್ತಾಯ ಪಡಿಸಬಹುದೆಂಬ ನಿರೀಕ್ಷಣೆಯೂ ಆನಿ ಬೆಸೆಂಟರಿಗಿತ್ತು. ಆದ್ದರಿಂದ ಅವರು ಮಸೂದೆಗೆ ಸಮ್ಮತಿ

ಕೊಡುವಂತೆ ಕಾಂಗ್ರೆಸ್ ಮುಖಂಡರನ್ನು ಕೇಳಿಕೊಂಡರು. ಆದರೆ ಅವರು 'ಪ್ರಕೃತ ಅಧಿಕಾರದಲ್ಲಿರುವ ಬ್ರಿಟಿಷ್ ಮಂತ್ರಿಮಂಡಲ ಈ ಮಸೂದೆಯನ್ನು ಕಸದ ಬುಟ್ಟಿಗೆ ಬಿಸುಡುವುದೇ ಹೊರತು ಮಾನ್ಯಮಾಡುವುದಿಲ್ಲ'ವೆಂಬ ಅಭಿಪ್ರಾಯವನ್ನು ಸೂಚಿಸಿ, "ಪಂಡಿತ ಮೋತಿಲಾಲ್‌ರವರು ಅಥವಾ ತಾವು ಸೂಚಿಸುವ ಮತ್ತಿನ್ನಾರಾದರೂ ಡಾ. ಆನಿ ಬೆಸೆಂಟರ ಮಸೂದೆಗೆ ಸಮ್ಮತಿಸಿದಲ್ಲಿ ಪಾರ್ಲಿಮೆಂಟ್ ಆ ಮಸೂದೆಯನ್ನು ಒಪ್ಪುವ ಸಂಭವವಿದೆ ಯೆಂದು ಬ್ರಿಟಿಷ್ ಸರ್ಕಾರದಲ್ಲಿ ಭಾರತ ಮಂತ್ರಿಗಳಾದ ಲಾರ್ಡ್ ಬರ್ಕನ್ ಹೆಡ್‌ರವರು ಆಶ್ವಾಸನ ಕೊಟ್ಟಲ್ಲಿ" ಆ ಮಸೂದೆಗೆ ಅಂಥವರ ಬೆಂಬಲಗಳಿಸಿ ಕೊಡುವುದಾಗಿ ಗಾಂಧೀಜಿಯವರು ಹೇಳಿದರು. ಲಾರ್ಡ್ ಬರ್ಕನ್‌ಹೆಡ್‌ರವರು ಈ ಸೂಚನೆಯನ್ನು ಗಮನಕ್ಕೆ ತಂದುಕೊಳ್ಳಲೂ ಇಲ್ಲ ; ಆ ಬಗೆಗೆ ಯಾವ ಅಭಿಪ್ರಾಯವನ್ನೂ ಸೂಚಿಸಲಿಲ್ಲ.

ಈ ಇಕ್ಕಟ್ಟಿನಲ್ಲಿ ಆನಿ ಬೆಸೆಂಟರ ಮಸೂದೆಗೆ ಕಾಂಗ್ರೆಸ್ ಪಕ್ಷದ ಒಪ್ಪಿಗೆ ದೊರೆಯಲಿಲ್ಲವಾದರೂ ಅದರಿಂದ ಅವರು ಎದೆಗುಂದಲಿಲ್ಲ. ಮಸೂದೆಯನ್ನು ಮತ್ತೆ ೧೯೨೭ನೇ ಜನವರಿಯಲ್ಲಿ ಪಾರ್ಲಿಮೆಂಟಿನಲ್ಲಿ ಚರ್ಚೆಗೆ ತರಲು ವ್ಯವಸ್ಥೆ ಮಾಡಿದರು. ಅಷ್ಟೇ ಅಲ್ಲದೆ, "ಇತ್ತೀಚಿನ ಭಿನ್ನಾಭಿಪ್ರಾಯಗಳನ್ನು ಮರೆತು, ಭಾರತದ ಭವಿಷ್ಯಹಿತಕ್ಕಾಗಿ ಮತ್ತೆ ರಾಷ್ಟ್ರೀಯ ಐಕ್ಯತೆಯನ್ನು ಸಾಧಿಸೋಣ. ಪ್ರಕೃತ ಪಾರ್ಲಿಮೆಂಟಿನ ಮುಂದಿರುವ ಭಾರತ ಸ್ವಾತಂತ್ರ್ಯ ಮಸೂದೆ ನಿಮ್ಮ ದೃಷ್ಟಿಯಿಂದ ಸಮರ್ಪಕವಲ್ಲದಿದ್ದರೆ, ಇನ್ನೊಂದು ಮಸೂದೆಯನ್ನು ಸಿದ್ಧಗೊಳಿಸಿ. ಅದು ೧೯೨೫ರಲ್ಲಿ ಮಂಡಿಸಿದ ಮಸೂದೆಯಿಂದ ದೊರೆಯ ಬಹುದಾದಷ್ಟು ಸ್ವಾತಂತ್ರವನ್ನು ಸಾಧಿಸುವಂತಿದ್ದರೆ, ನಾನು ಹಳೆಯ ಮಸೂದೆಯನ್ನು ಹರಿದು ಹಾಕಿ ಹೊಸದನ್ನು ಒಪ್ಪಿಕೊಳ್ಳುತ್ತೇನೆ" ಎಂದು ಮತ್ತೆ ಕಾಂಗ್ರೆಸಿಗರಲ್ಲಿ ಮನವಿಮಾಡಿಕೊಂಡರು. ಈ ಮನವಿಯಿಂದ ಕೂಡ ಯಾವ ಪ್ರಯೋಜನವೂ ಆಗಲಿಲ್ಲ.

ಆನಿ ಬೆಸೆಂಟರ ಮಸೂದೆ ಪ್ರಕಟವಾಗಿ ಮೂರುವರ್ಷಗಳಾದರೂ, ಅದಕ್ಕೆ ಪ್ರತಿಸ್ಪರ್ಧಿಯಾದ ಇನ್ನೊಂದು ರಾಜ್ಯಾಂಗ ಶಾಸನ ಮಸೂದೆ ಸಿದ್ಧವಾಗಲಿಲ್ಲವೆಂಬುದೇ, ಈ ಮಸೂದೆಯ ಸಂಬಂಧದಲ್ಲಿ ಆನಿ ಬೆಸೆಂಟರು ವಹಿಸಿದ್ದ ಎಚ್ಚರಿಕೆ, ಶ್ರಮಗಳಿಗೆ ನಿದರ್ಶನವಾಗಿದೆ. ಆದರೂ ಅವರ ಈ

ಶ್ರಮ ಅಂದಿನ ಪರಿಸ್ಥಿತಿಯಲ್ಲಿ ಫಲಕಾರಿಯಾಗಲಿಲ್ಲ.

ಆನಿ ಬೆಸೆಂಟರು ೧೯೨೭ನೇ ಜನವರಿಯಲ್ಲಿ ಮಸೂದೆಯನ್ನು ಪಾರ್ಲಿಮೆಂಟಿನಲ್ಲಿ ಚರ್ಚೆಗಿಡಿಸಿದ ಕೆಲವು ತಿಂಗಳುಗಳ ಮೇಲೆ, ಬ್ರಿಟಿಷ್ ಸರ್ಕಾರವು ಇಂಡಿಯಾಕ್ಕೆ ಸ್ವಾತಂತ್ರ್ಯವನ್ನು ಕೊಡುವ ವಿಚಾರವನ್ನು ವಿಮರ್ಶಿಸುವುದಕ್ಕಾಗಿ ಸರ್ ಜಾನ್ ಸೈಮನ್‌ರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಏರ್ಪಡಿಸಿತು. ಈ ಸಮಿತಿಯ ರಚನೆಯಬಗ್ಗೆ ಸುದ್ದಿ ಬಂದಾಗ ಆನಿ ಬೆಸೆಂಟರು ಇಂಡಿಯಾದಲ್ಲಿದ್ದರು. ಅವರು ಈ ಸಮಿತಿಯ ಸದಸ್ಯತ್ವ ಮತ್ತು ಕಾರ್ಯರಂಗದ ವಿಸ್ತಾರವನ್ನು ಅಧ್ಯಯನಮಾಡಿ ಈ ಸಮಿತಿಯನ್ನೂ ಅದರ ಕಾರ್ಯ ಕಲಾಪಗಳನ್ನೂ ಭಾರತೀಯರು ಪೂರ್ಣವಾಗಿ ನಿರಾಕರಿಸಬೇಕೆಂದೂ, ಅದರೊಡನೆ ಸಹಕರಿಸಕೂಡದೆಂದೂ ನಿರ್ಣಯಿಸಿದರು. ಈ ಸಮಿತಿಯಲ್ಲಿ ಬ್ರಿಟಿಷ್ ಪ್ರತಿನಿಧಿಗಳು ಮಾತ್ರ ಇದ್ದು ಭಾರತೀಯರಾರಿಗೂ ಸ್ಥಾನವಿಲ್ಲದ್ದು, ಭಾರತೀಯರಿಗೆ ಅವಮಾನ ಮಾಡಿದಂತೆ ಎಂದು ಅವರು ವಾದಿಸಿದರು. ಇದೊಂದು ಕಾರಣಕ್ಕಾಗಿಯೇ ಸಮಿತಿಯನ್ನು ಭಾರತೀಯರು ನಿರಾಕರಿಸಬೇಕೆಂದರು; ಬ್ರಿಟಿಷ್ ಸರ್ಕಾರದವರು ಪೂರ್ಣ ಸ್ವರಾಜ್ಯ ದಾನಕ್ಕೆ ಖಚಿತವಾದ ಒಪ್ಪಗೆಯನ್ನು ಕೊಡದೆ, ಇಂಥ ಸಮಿತಿಗಳು ಸೂಚಿಸುವ ಅಲ್ಪಮಿತಿಯ 'ಆಡಳಿತ–ಪುನರ್ವ್ಯವಸ್ಥೆ'ಯಿಂದ, ಅರೆಮನಸ್ಸಿನ ಸುಧಾರಣೆಗಳಿಂದ ಭಾರತೀಯರಿಗೆ ಏನೂ ಪ್ರಯೋಜನವಿಲ್ಲವೆಂದು ಸ್ಪಷ್ಟವಾಗಿ ಹೇಳಿದರು.

ಈ ಎರಡು ಅಂಶಗಳನ್ನು ಆಧಾರವಾಗಿಟ್ಟುಕೊಂಡು ಸೈಮನ್ ಸಮಿತಿಯ ಬಹಿಷ್ಕಾರವನ್ನು ಘೋಷಿಸಿ, ಈ ಕಾರ್ಯಕ್ರಮವನ್ನು ಬಲಗೊಳಿಸಲು ಇಡೀ ದಕ್ಷಿಣ ಭಾರತದಲ್ಲಿ ಬಿರುಗಾಳಿಯ ವೇಗದಲ್ಲಿ ಪ್ರವಾಸ ಮಾಡಿದರು. ಕಾಂಗ್ರೆಸಿಗರೂ ಈ ಕಾರ್ಯಕ್ರಮವನ್ನು ಒಪ್ಪಿ ಸಮಿತಿಯನ್ನು ಸಂಪೂರ್ಣವಾಗಿ ಬಹಿಷ್ಕರಿಸಿದರು. ಸಮಿತಿ ತನಗೆ ನಿಯಮಿತವಾಗಿದ್ದ ಕೆಲಸವನ್ನು ತನಗೆ ಸಾಧ್ಯವಾದ ರೀತಿಯಲ್ಲಿ ನಿರ್ವಹಿಸಿತಾದರೂ, ಅದು ಇಂಡಿಯಾದಲ್ಲಿದ್ದಷ್ಟು ಕಾಲವೂ ಈ ಬಹಿಷ್ಕಾರದ ಬಿಸಿಯನ್ನನುಭವಿಸಿತು.

ಆದರೆ ಈ ನಿರೋಧಕ ಕಾರ್ಯಕ್ರಮವೊಂದರಿಂದಲೇ ತೃಪ್ತರಾಗಿ ಕೂರದೆ, ಅವರು ರಚನಾತ್ಮಕ ಕಾರ್ಯದಲ್ಲಿಯೂ ತೊಡಗಿದರು. ೧೯೨೫ರಲ್ಲಿ ಆನಿ ಬೆಸೆಂಟರು

ತಮ್ಮ ಭಾರತೀಯ ರಾಜ್ಯಾಂಗ ವ್ಯವಸ್ಥೆಯ ಮಸೂದೆಯನ್ನು ಸಿದ್ಧಪಡಿಸಿದಾಗಿನಿಂದ-ಕಾಂಗ್ರೆಸ್ ಅದಕ್ಕೆ ತನ್ನ ಸಮ್ಮತಿಯನ್ನು ಕೊಡದಿದ್ದರೂ—ಕಾಂಗ್ರೆಸಿಗರ ಮನಸ್ಸು ಸ್ವತಂತ್ರ ಭಾರತದ ರಾಜ್ಯಾಂಗ ವ್ಯವಸ್ಥೆಯ ಸಮಸ್ಯೆಯ ಕಡೆಗೆ ತಿರುಗಿತೆಂಬುದು ನಿರ್ವಿವಾದವಾದ ವಿಚಾರ. ಏಕೆಂದರೆ ೧೯೨೦ರಲ್ಲಿ ಕಾಂಗ್ರೆಸಿನ ನಾಗಪುರದ ಅಧಿವೇಶನದ ಅಧ್ಯಕ್ಷರಾಗಿದ್ದ ಚಕ್ರವರ್ತಿ ವಿಜಯರಾಘವಾಚಾರ್ಯರು, ೧೯೨೬ರಲ್ಲಿ ಗೌಹತಿ ಅಧಿವೇಶನದ ಅಧ್ಯಕ್ಷರಾಗಿದ್ದ ಎಸ್. ಶ್ರೀನಿವಾಸ ಅಯ್ಯಂಗಾರ್ಯರು ಇವರು ತಮ್ಮ ಕಾಯದೆ ಮತ್ತು ನ್ಯಾಯಶಾಸ್ತ್ರಜ್ಞಾನವನ್ನೂ ವಕೀಲಿ ವೃತ್ತಿಯ ಅನುಭವವನ್ನೂ ವಿನಿಯೋಗಿಸಿ ಪ್ರತ್ಯೇಕ ಪ್ರತ್ಯೇಕವಾಗಿ ಎರಡು ರಾಜ್ಯಾಂಗ ವ್ಯವಸ್ಥೆಗಳನ್ನು ರಚಿಸಿದರು. ತಮ್ಮ ಈ ಕಾರ್ಯದಲ್ಲಿ ಆನಿ ಬೆಸೆಂಟರ ಮಸೂದೆಯಿಂದ ಸ್ಫೂರ್ತಿ ದೊರೆಯಿತೆಂದೂ ಅದರಿಂದ ತುಂಬಾ ಸಹಾಯವಾಯಿತೆಂದೂ ಒಪ್ಪಿಕೊಂಡಿದ್ದರು.

ಇತ್ತ ಸೈಮನ್ ಸಮಿತಿಯ ಬಹಿಷ್ಕಾರವನ್ನು ವ್ಯವಸ್ಥೆ ಮಾಡಿದ ಮೇಲೆ ಆನಿ ಬೆಸೆಂಟರು ೧೯೨೮ ನೇ ಫೆಬ್ರುಯರಿಯಲ್ಲಿ ದೆಹಲಿಯಲ್ಲಿ ಮತ್ತೆ ಒಂದು ಸರ್ವಪಕ್ಷ ಸಮ್ಮೇಳನವನ್ನು ಸೇರಿಸಿದರು. ಈ ಸಮ್ಮೇಳನ ರಾಜ್ಯಾಂಗ ರಚನೆಗೆ ಸಂಬಂಧಿಸಿದ ಹಲವಾರು ಮುಖ್ಯಾಂಶಗಳನ್ನು ಮತ್ತೆ ಚರ್ಚಿಸಿ, ಮೇ ತಿಂಗಳಿನಲ್ಲಿ ಆನಿ ಬೆಸೆಂಟರ ಸೂಚನೆಯಂತೆ, ಪಂಡಿತ ಮೋತೀಲಾಲ್ ನೆಹ್ರೂರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿಯಮಿಸಿ ರಾಜ್ಯಾಂಗ ವ್ಯವಸ್ಥೆಯ ಕರಡನ್ನು ತಯಾರಿಸುವ ಹೊಣೆಯನ್ನು ಆ ಸಮಿತಿಗೆ ವಹಿಸಿತು. ಆನಿ ಬೆಸೆಂಟರೂ ಆ ಸಮಿತಿಯ ಸದಸ್ಯರಲ್ಲೊಬ್ಬರಾಗಿದ್ದರು. ನೆಹ್ರೂ ವರದಿಯಲ್ಲಿ ಬೆಸೆಂಟರ ಮಸೂದೆಯ ಹಲವಾರು ಅಂಶಗಳು ಅಂಗೀಕರಿಸಲ್ಪಟ್ಟಿದ್ದುವು. ಆ ವರದಿಯ ರಚನೆಯಲ್ಲಿ ಬೆಸೆಂಟರು ತುಂಬಾ ಆಸಕ್ತಿಯಿಂದ ಸಹಕರಿಸಿದರು.

ಆ ವರ್ಷ ಡಿಸೆಂಬರ್‌ನಲ್ಲಿ ಕಲ್ಕತ್ತಾದಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಆ ಬಾರಿ ಪಂಡಿತ ಮೋತಿಲಾಲ್ ನೆಹ್ರೂರವರೇ ಅಧಿವೇಶನದ ಅಧ್ಯಕ್ಷತೆ ವಹಿಸಿದ್ದರು. ಅವರ ನೇತೃತ್ವದಲ್ಲಿ ರಚಿತವಾಗಿದ್ದ ವರದಿಯಲ್ಲಿ ಸೂಚಿತವಾಗಿದ್ದ ರಾಜ್ಯಾಂಗ ವ್ಯವಸ್ಥೆಯನ್ನು 'ರಾಷ್ಟ್ರದ ಬೇಡಿಕೆ'ಯೆಂದು

ಕಾಂಗ್ರೆಸ್ ಅಂಗೀಕರಿಸಿತು. ಹೀಗೆ, ಇಡೀ ರಾಷ್ಟ್ರಕ್ಕೆ ಸಮ್ಮತವಾದ ರಾಜ್ಯಾಂಗ ವ್ಯವಸ್ಥೆಯೊಂದನ್ನು ಸಿದ್ಧಗೊಳಿಸಿ ಅದನ್ನು ಅಂಗೀಕರಿಸಿ ಶಾಸನ ಮಾಡುವಂತೆ ಬ್ರಿಟನ್ನನ್ನು ಒತ್ತಾಯಪಡಿಸಬೇಕೆಂಬ ಆನಿ ಬೆಸೆಂಟರ ಆಸೆಯಲ್ಲಿ ಅರ್ಧ ನೆರವೇರಿತು. ಅವರ ಅಭಿಪ್ರಾಯದಲ್ಲಿ 'ಬ್ರಿಟನ್ನನ್ನು ಒತ್ತಾಯ ಪಡಿಸಬೇಕು' ಎಂಬ ಮಾತಿನ ಅರ್ಥ ಶಾಂತರೀತಿಯಿಂದ, ಕಾನೂನು ಬದ್ಧವಾದ ಮಾರ್ಗದಲ್ಲಿ, ಪಾರ್ಲಿಮೆಂಟನ್ನು ಒಲಿಸಿಕೊಂಡು........ ಮುಂತಾಗಿ.

ಆದರೆ ಆ ಹೊತ್ತಿಗೆ ಕಾಂಗ್ರೆಸ್ಸಿನಲ್ಲಿ ಪ್ರಭಾವಶಾಲಿಗಳಾಗಿದ್ದ ಗಾಂಧೀಜಿಯವರಿಗೆ ಈ ವಿಧಾನದಿಂದ ಬ್ರಿಟಿಷರು ಬಗ್ಗುವರೆಂಬ ನಂಬಿಕೆಯಿರಲಿಲ್ಲ. ಆದ್ದರಿಂದ ಕಾಂಗ್ರೆಸ್ ನೆಹ್ರೂ ವರದಿಯನ್ನು ಒಪ್ಪಿದಮೇಲೆ, ಗಾಂಧೀಜಿಯವರು ಒಂದು ಠರಾವನ್ನು ಸೂಚಿಸಿದರು: ಬ್ರಿಟನ್ನು ೧೯೨೯ ರ ಅಂತ್ಯದೊಳಗಾಗಿ, ನೆಹ್ರೂ ವರದಿಯಲ್ಲಿ ಸೂಚಿತವಾಗಿರುವ 'ಡೊಮಿನಿಯನ್ ಸ್ಟೇಟಸ್' ಅನ್ನು ಇಂಡಿಯಾಕ್ಕೆ ಕೊಡದಿದ್ದಲ್ಲಿ ಕಾಂಗ್ರೆಸ್ ತೀವ್ರವಾದ ಅಸಹಕಾರ ಮತ್ತು ನಿರಾಕರಣೆಯ ಚಳವಳಿಯನ್ನು ಆರಂಭಿಸಿ ತನ್ನ ರಾಷ್ಟ್ರ ಸ್ವಾತಂತ್ರ್ಯ ಸಾಧನೆಯ ಪ್ರಯತ್ನವನ್ನು ಮುಂದುವರಿಸುವುದು ಎಂಬುದೇ ಈ ಠರಾವಿನ ಸಾರಾಂಶವಾಗಿತ್ತು. ೧೯೧೯ ರ ಅಮೃತಸರದ ಕಾಂಗ್ರೆಸ್ ಅಧಿವೇಶನದಲ್ಲಿ ಆನಿ ಬೆಸೆಂಟರು ಗಾಂಧೀಜಿಯವರ ಅಸಹಕಾರ ಚಳವಳಿಯನ್ನು ತೀವ್ರವಾಗಿ ಖಂಡಿಸಿದಂತೆ ಈ ಬಾರಿಯೂ ಖಂಡಿಸಿದರು. ಆದರೆ ಕಾಂಗ್ರೆಸ್ ಗಾಂಧೀಜಿಯವರ ಸೂಚನೆಗೆ ಬೆಂಬಲಕೊಟ್ಟಿತು.

ಈ ಹೊತ್ತಿಗೆ ಆನಿ ಬೆಸೆಂಟರಿಗೆ ಎಂಭತ್ತು ವರ್ಷ ವಯಸ್ಸಾಗಿತ್ತು. ಗಾಂಧೀಜಿಯವರ ನೇತೃತ್ವದಲ್ಲಿ, ಭಾರತವರ್ಷ ತನ್ನ ಸ್ವಾತಂತ್ರ್ಯಸಾಧನೆಗಾಗಿ, ತಮ್ಮ ಮಾರ್ಗದಿಂದ ತೀರಾ ಭಿನ್ನವಾದ ಮಾರ್ಗದಲ್ಲಿ ಮುಂದುವರಿಯುತ್ತಿದೆಯೆಂಬುದು ಅವರಿಗೆ ಸ್ಪಷ್ಟವಾಯಿತು. ಆ ಹಾದಿಯನ್ನು ವಿರೋಧಿಸುವುದರಿಂದ ಪ್ರಯೋಜನವಿಲ್ಲವೆಂಬುದೂ ಅವರಿಗೆ ಖಚಿತವಾಯಿತು. ಆದ್ದರಿಂದ ಅವರು ಭಾರತ ರಾಜಕೀಯರಂಗದಿಂದ ವಿರಮಿಸಿದರು. ಆದರೂ ತಮ್ಮ ಅಂತ್ಯಕಾಲದ ತನಕ, ಭಾರತವರ್ಷವು ಶೀಘ್ರವಾಗಿ ಸ್ವತಂತ್ರವಾಗುವುದೆಂದೂ ಬ್ರಿಟಿಷ್ ಕಾಮನ್‌ವೆಲ್ತ್‌ನಲ್ಲಿ ಉಳಿಯುವುದೆಂದೂ ಜಗದ್ವ್ಯವಹಾರದಲ್ಲಿ

ತನ್ನದೇ ಆದ ವಿಶಿಷ್ಟ ಕಾರ್ಯನೀತಿಯಿಂದ ಗಣ್ಯ ಸ್ಥಾನವನ್ನು ಗಳಿಸಿಕೊಳ್ಳುವುದೆಂದೂ ನಂಬಿದ್ದರು. ಅವರ ಈ ನಂಬಿಕೆ ಇಂದು ಫಲಿಸಿದೆಯೆನ್ನುವುದೇ ಆನಿ ಬೆಸೆಂಟರ ರಾಜಕೀಯ ದೂರದರ್ಶಿತ್ವಕ್ಕೆ ಅತ್ಯುತ್ತಮ ನಿದರ್ಶನ; ಭಾರತ ವರ್ಷ ಆನಿ ಬೆಸೆಂಟರ ಶತಾಬ್ದ ಜಯಂತಿಯ ಹೊತ್ತಿಗೆ (ಅವರು ನಿರ್ವಾಣ ಹೊಂದಿದ ಹದಿನಾಲ್ಕು ವರ್ಷಗಳ ಅನಂತರ) ಸ್ವತಂತ್ರರಾಷ್ಟ್ರವಾಯಿತು; ಸ್ವತಂತ್ರವಾದರೂ ಬ್ರಿಟಿಷ್ ಕಾಮನ್‌ವೆಲ್ತ್‌ನಲ್ಲಿ ಉಳಿಯಿತು; ಜಗದ್ವ್ಯವಹಾರದಲ್ಲಿ ತನ್ನ ವಿಶಿಷ್ಟ ಕಾರ್ಯನೀತಿಯಿಂದ ಗಣ್ಯಸ್ಥಾನವನ್ನು ಗಳಿಸಿಕೊಂಡಿತು. ಹೀಗೆ ಆನಿ ಬೆಸೆಂಟರ ಕನಸು ಫಲಿಸಿತು.

## ೧೮

ಆನಿ ಬೆಸೆಂಟರು ಇಂಡಿಯಾದಲ್ಲಿ ನೆಲಸಿದಮೇಲೆ ಅವರು ಭಾರತೀಯ ಧರ್ಮ ಸಂಸ್ಕೃತಿಗಳ ಪುನರುಜ್ಜೀವನಕ್ಕಾಗಿ, ಭಾರತೀಯರ ವಿದ್ಯಾಭಿವೃದ್ಧಿ, ಸಮಾಜ ಸಂಸ್ಕರಣ, ಸ್ವಾತಂತ್ರ್ಯ ಸಾಧನೆಗಳಿಗಾಗಿ ನಡೆಸಿದ ಅವಿಶ್ರಾಂತ ಪರಿಶ್ರಮದ ಪರಿಣಾಮವನ್ನು ಈವರೆಗೆ ಸ್ಥೂಲವಾಗಿ ವಿವೇಚಿಸಿದ್ದಾಯಿತು.

ಈ ಮುವತ್ತೈದು ವರ್ಷಗಳಲ್ಲಿ ಅವರು ಭಾರತವರ್ಷಕ್ಕೆ ಸಲ್ಲಿಸಿದ ಸೇವೆ ಅಮೌಲ್ಯವಾದದ್ದಾದರೂ, ಅಪಾರವೆಂಬುದು ನಿಜವಾದರೂ, ಆನಿ ಬೆಸೆಂಟರ ಕಾರ್ಯಕ್ರಮ ಭಾರತವರ್ಷದಷ್ಟಕ್ಕೇ ಪರಿಮಿತವಾಗಿರಲಿಲ್ಲವೆಂಬುದನ್ನೂ ನಾವು ಗಮನಿಸಬೇಕು. ಅವರ ಚಟುವಟಿಕೆಗಳು ಇಡೀ ಜಗತ್ತನ್ನು ಆವರಿಸಿದ್ದುವು. ಸ್ವಲ್ಪ ಹೆಚ್ಚು ಕಡಿಮೆ ಪ್ರತಿವರ್ಷವೂ ಅವರು ಜಗತ್ತಿನ ವಿವಿಧ ರಾಷ್ಟ್ರಗಳಲ್ಲಿ ಪ್ರವಾಸಮಾಡಿ ಅಲ್ಲಿ ತಮಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ಮುಗಿಸಿ ಬರುತ್ತಿದ್ದರು. ಒಂದಲ್ಲ ಹತ್ತು ಚಳವಳಿಗಳ ನಾಯಕರಾಗಿ, ನೂರಲ್ಲ ಸಾವಿರಾರು ಸ್ಥಳಗಳಿಗೆ ಬೇಟಿಕೊಡುತ್ತಿದ್ದರು. ಅಲ್ಲೆಲ್ಲಾ ಭಾಷಣಗಳನ್ನು ಮಾಡುತ್ತಿದ್ದರು.

ಈ ಕೆಲಸಗಳ ಜೊತೆಗೆ, ಅಪಾರ ಪತ್ರಲೇಖನ, ಗ್ರಂಥಲೇಖನಗಳು **ಕೂಡ** ನಿರಂತರವಾಗಿ ನಡೆಯುತ್ತಿದ್ದುವು.

ಅದೂ ತಮ್ಮ ಇಳಿವಯಸ್ಸಿನಲ್ಲಿ ಆನಿ ಬೆಸೆಂಟರು, ಅಷ್ಟೊಂದು ಕೆಲಸ, ಅಷ್ಟು ವಿಸ್ತಾರವಾದ ಪ್ರವಾಸಗಳನ್ನು ನಿರಂತರವಾಗಿ, ದೀರ್ಘಕಾಲ ನಡೆಸಿದರೆಂಬುದು ಅವರ ಅದ್ಭುತ ದೇಹಶಕ್ತಿ, ಮನೋನಿರ್ಧಾರ, ಸೇವಾಕಾಂಕ್ಷೆಗಳಿಗೆ ನಿದರ್ಶನವಾಗಿದೆ. ಅವರ ಈ ಚಟುವಟಿಕೆಗಳನ್ನೆಲ್ಲಾ ಅನುಕ್ರಮವಾಗಿ ವಿಸ್ತಾರವಾಗಿ ಹೇಳಲು ಇಲ್ಲಿ ಎಡೆಯಿಲ್ಲ. ಆದ್ದರಿಂದ ಅದನ್ನು ಕೆಲವು ಮಾತುಗಳಲ್ಲಿ ಸೂಚಿಸಬಹುದಾಗಿದೆ.

ಮೊದಲನೆಯದಾಗಿ, ಆನಿ ಬೆಸೆಂಟರು ಇಂಡಿಯಾಕ್ಕೆ ಬಂದದ್ದು ಬ್ರಹ್ಮಜ್ಞಾನ ಸಮಾಜದ ಸದಸ್ಯೆಯಾಗಿ; ಆ ಸಮಾಜಕ್ಕೆ ತಮ್ಮ ಸೇವೆಯನ್ನು ಸಲ್ಲಿಸುವುದಕ್ಕಾಗಿ. ಈ ಕಾರ್ಯವನ್ನು ಅವರು ಅತ್ಯಂತ ದಕ್ಷತೆಯಿಂದ

ನಿರ್ವಹಿಸಿದರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಆನಿ ಬೆಸೆಂಟರು ಇಂಡಿಯಾದಲ್ಲಿ ನೆಲೆಸಿದಾಗ ಕರ್ನಲ್ ಆಲ್ಕಾಟ್‌ರವರು ಬ್ರಹ್ಮಜ್ಞಾನ ಸಮಾಜದ ಅಧ್ಯಕ್ಷರಾಗಿದ್ದು ಸಮಾಜದ ಕೇಂದ್ರ ಕಾರ್ಯಾಲಯವಿರುವ ಅಡ್ಯಾರ್‌ನಲ್ಲಿರುತ್ತಿದ್ದರು. ಇಂಡಿಯಾಕ್ಕೆ ಬಂದಂದಿನಿಂದ ಹಿಂದೂಧರ್ಮದಲ್ಲಿ ಆಸಕ್ತಿವಹಿಸಿದ ಆನಿ ಬೆಸೆಂಟರು, ಹಿಂದೂಗಳಿಗೆ ಅತ್ಯಂತ ಪವಿತ್ರವಾದ ಕಾಶೀಕ್ಷೇತ್ರದಲ್ಲಿ ನೆಲೆಸಿದರು. ಅಲ್ಲಿದ್ದುಕೊಂಡೇ ಅವರು ಬ್ರಹ್ಮಜ್ಞಾನ ಸಮಾಜದ ಕೆಲಸಗಳನ್ನು ನೆರವೇರಿಸುತ್ತಿದ್ದರು. ಈ ಸಂಬಂಧದಲ್ಲಿ ಆಗಿಂದಾಗ್ಯೆ ಇಂಡಿಯಾದ ವಿವಿಧ ಭಾಗಗಳಲ್ಲೂ, ಇಂಡಿಯಾದ ಹೊರಗೂ ಪ್ರವಾಸಗಳನ್ನು ಕೈಗೊಳ್ಳುತ್ತಿದ್ದರು.

ಹನ್ನೆರಡು ವರ್ಷಕಾಲ ಸಮಾಜಕ್ಕೆ ಈ ರೀತಿ ಸೇವೆ ಸಲ್ಲಿಸಿದಮೇಲೆ, ಅಧ್ಯಕ್ಷ ಆಲ್ಕಾಟ್‌ರವರ ನಿಧನಾನಂತರ ಆನಿ ಬೆಸೆಂಟರು ಸಮಾಜದ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಸಮಾಜದ ಅಧ್ಯಕ್ಷತೆಯ ಅವಧಿ ಏಳುವರ್ಷ ಮಾತ್ರವಾದರೂ, ಸದಸ್ಯರು ಆನಿ ಬೆಸೆಂಟರನ್ನು ೧೯೧೪, ೧೯೨೧ ಮತ್ತು ೧೯೨೮ರಲ್ಲಿ–ಹೀಗೆ ಮತ್ತೆ ಮೂರುಬಾರಿ ಅಧ್ಯಕ್ಷತೆಗೆ ಆರಿಸಿದರೆಂಬುದೇ, ಸಮಾಜದ ಸದಸ್ಯರಿಗೆ ಅವರಲ್ಲಿದ್ದ ಅಪಾರ ನಂಬಿಕೆ, ಅಪ್ರತಿಮ ಗೌರವಗಳನ್ನು ಸೂಚಿಸುತ್ತದೆ.

ಆನಿ ಬೆಸೆಂಟರ ಕಾಲದಲ್ಲಿ ಸಮಾಜದ ಸದಸ್ಯತ್ವ ಆಕೆ ಅಧ್ಯಕ್ಷತೆಗೆ, ಬಂದಾಗ ಇದ್ದುದರ ಮೂರರಷ್ಟು ಬೆಳೆಯಿತು! ಜಗತ್ತಿನ ವಿವಿಧ ಭಾಗಗಳಲ್ಲಿ ಸಮಾಜದ ಶಾಖೆಗಳು ಹುಟ್ಟಿ ಬ್ರಹ್ಮಜ್ಞಾನ ಸಮಾಜ ನಿಜವಾಗಿ ಜಗದ್ವ್ಯಾಪ್ತಿಯಾಯಿತು.

ಈ ವಿಸ್ತರಣೆಯೂ, ಆನಿ ಬೆಸೆಂಟರ ಅನುಪಮ ಮಾನವೀಯತೆಯೂ ಅವರನ್ನು ಹಲವಾರು ಕಾರ್ಯಕ್ರಮಗಳಲ್ಲಿ ತೊಡಗುವಂತೆ ಮಾಡಿದುವೆನ್ನಬಹುದು. ಈ ವಿಚಾರವಾಗಿ ಅನಿಬೆಸೆಂಟರವರೇ "ಬ್ರಹ್ಮಜ್ಞಾನ ಸಮಾಜಕ್ಕೆ ಸೇವೆ ಸಲ್ಲಿಸಬೇಕಾದದ್ದು ನನ್ನ ಪ್ರಥಮ ಕರ್ತವ್ಯವಾದರೂ, ನಾನು ಜಗತ್ತಿಗೆ ಮತ್ತು ವಿಶೇಷತಃ ಭಾರತವರ್ಷಕ್ಕೆ ಕೆಲವು ವಿಶಿಷ್ಟ ಸೇವೆಗಳನ್ನು ಸಲ್ಲಿಸಬೇಕಾದದ್ದೂ ನನ್ನ ಮುಖ್ಯ ಕರ್ತವ್ಯಗಳಲ್ಲೊಂದಾಗಿದೆ" ಎಂದು ಹೇಳಿದ್ದಾರೆ. ಹೀಗೆ ಹೇಳಿದ್ದು ಮಾತ್ರವಲ್ಲ ತಮ್ಮ ಹೇಳಿಕೆಯನ್ನು ಕಾರ್ಯರೂಪಕ್ಕಿಳಿಸಲು

ಅವರು ಪ್ರಬಲವಾದ ಪ್ರಯತ್ನಗಳನ್ನು ಮಾಡಿದರು.

ಜಗತ್ತಿನ ವಿವಿಧ ರಾಷ್ಟ್ರಗಳ, ಜನಾಂಗಗಳ ನಡುವೆ ಸ್ನೇಹ ಸೌಹಾರ್ದಗಳನ್ನು ಸಾಧಿಸಲು ಅವರು ತುಂಬಾ ಶ್ರಮಿಸಿದರು. ವಿಶ್ವಭ್ರಾತೃತ್ವದ ಚಳವಳಿ, ಅಂತರರಾಷ್ಟ್ರೀಯ ಯುವಜನ ಚಳವಳಿ, ವಿಶ್ವಶಾಂತಿಸಾಧನಾ ಸಂಘ- ಇವೆಲ್ಲವೂ ಅವರ ಜಗತ್ಕಲ್ಯಾಣ ಸಾಧನೆಯ ಪ್ರಯತ್ನಗಳು. ಆನಿ ಬೆಸೆಂಟರ ಕಾಲದಲ್ಲಿ ಈ ಚಳವಳಿಗಳ ಮಹತ್ವ ಅಷ್ಟಾಗಿ ಜನಸಾಮಾನ್ಯರಿಗೆ ತಿಳಿಯದೆಹೋಯಿತಾದರೂ, ಎರಡನೆಯ ಮಹಾಯುದ್ಧ ನಡೆದಮೇಲೆ, ಈಗ, ಮೂರನೆಯ ಮಹಾಯುದ್ಧವನ್ನು ಹೇಗಾದರೂ ಮಾಡಿ ತಪ್ಪಿಸದಿದ್ದರೆ, ಮಾನವ ಕುಲವೇ ನಾಶವಾಗಿ ಹೋಗುವ ಸಂಭವವುಂಟೆಂಬ ಭಯ ಹಬ್ಬಿರುವ ಇಂದಿನ ಸನ್ನಿವೇಶದಲ್ಲಿ ಆ ಚಳವಳಿಗಳ ಘನತೆ ಅವಶ್ಯಕತೆಗಳು ಅರ್ಥವಾಗುತ್ತಿವೆ. "ಮಾನವನೇ ಆರಾಧ್ಯಮೂರ್ತಿಯಾಗಿರುವ ದೇಗುಲವನ್ನು ಕಟ್ಟಲು ನಮ್ಮಲ್ಲಿ ತಕ್ಕಷ್ಟು ಸಾಧನಸಂಪತ್ತಿಯಿಲ್ಲ"ವೆಂದು ಮರುಗಿ, ಆ ಸಾಧನ ಸಂಪತ್ತಿಯನ್ನು ಕಲ್ಪಿಸಲು ಶ್ರಮಿಸಿದ ಆನಿ ಬೆಸೆಂಟರ ಜಗತ್ಸೇವೆಯ ಮಹತ್ವವನ್ನು ನಾವು ಈಗ ಮನಗಾಣುತ್ತಿದ್ದೇವೆ.

ಅವರ ಸೇವೆ ಕಾಲ ದೇಶಗಳೆರಡರ ದೃಷ್ಟಿಯಿಂದಲೂ ವಿಸ್ತಾರವಾದದ್ದು. ಅರ್ಧಶತಮಾನಕ್ಕಿಂತ ಹೆಚ್ಚುಕಾಲ ಅವರು ಜಗತ್ತಿನ ಎಲ್ಲ ರಾಷ್ಟ್ರಗಳಿಗೂ ಒಂದಲ್ಲ ಒಂದು ರೀತಿ ಸೇವೆ ಸಲ್ಲಿಸಿದರು. ಅಷ್ಟು ದೀರ್ಘಕಾಲ, ಅಷ್ಟೊಂದು ಪ್ರದೇಶಗಳಲ್ಲಿ ಜನಸೇವೆ ಮಾಡಿದ ವ್ಯಕ್ತಿ ಇನ್ನೊಬ್ಬರಿಲ್ಲವೆನ್ನಲಡ್ಡಿಯಿಲ್ಲ.

ಆದ್ದರಿಂದ ಅವರ ಈ ದೀರ್ಘ ಜನಸೇವೆಗಾಗಿ ಅವರನ್ನು ಅಭಿನಂದಿಸಲು ಹಲವಾರು ಪ್ರಮುಖ ವ್ಯಕ್ತಿಗಳು ಮುಂದೆ ಬಂದಿದ್ದರಲ್ಲಿ, ಅದಕ್ಕಾಗಿ ಒಂದು ದೊಡ್ಡ ಸಮಾರಂಭವನ್ನು ಏರ್ಪಡಿಸಿದ್ದರಲ್ಲಿ ಆಶ್ಚರ್ಯವಿಲ್ಲ.

ಆನಿ ಬೆಸೆಂಟರ ಸಾರ್ವಜನಿಕ ಸೇವೆಯ ಸ್ವರ್ಣಮಹೋತ್ಸವವನ್ನು ಆಚರಿಸಿದ ಈ ಸಮಾರಂಭ ೧೯೨೪ನೇ ಜುಲೈ ೨೩ ನೇ ತಾರೀಖು ಲಂಡನ್ನಿನ ಸುಪ್ರಸಿದ್ಧ "ಕ್ವೀನ್ಸ್ ಹಾಲ್"ನಲ್ಲಿ ನಡೆಯಿತು. ಈ ಸಮಾರಂಭದಲ್ಲಿ ಭಾಗವಹಿಸಲು ಜಗತ್ತಿನ ವಿವಿಧ ಭಾಗಗಳಿಂದ, ಸಾಮಾಜಿಕ, ಧಾರ್ಮಿಕ, ರಾಜಕೀಯ ರಂಗದ ಪ್ರಗತಿಶೀಲ ಮುಖಂಡರು ಬಂದಿದ್ದರು. ಆನಿ ಬೆಸೆಂಟರ ದೀರ್ಘ ಸೇವಾವಧಿಯಲ್ಲಿ ಒಂದಲ್ಲ ಒಂದು ಬಾರಿ ಅವರೊಡನೆ ಸಹಕರಿಸಿ ಕೆಲಸ

ಮಾಡಿದ್ದ ಜಾರ್ಜ ಲ್ಯಾನ್ಸ್‌ಬರಿ, ಬೆನ್ ಟಿಲೆಟ್, ಬೆನ್ ಟರ್ನರ್, ಮಾರ್ ಗ್ರೆಟ್ ಬಾಂಡ್‌ಫೀಲ್ಡ್, ಸತಿ ಪೆತಿಕ್‌ಲಾರೆನ್ಸ್, ಜಾನ್ ಸ್ಕರ್ ಮುಂತಾದ ಸೇವಾ ಧುರೀಣರು ಆ ಸಮಾರಂಭದಲ್ಲಿ ಭಾಷಣಮಾಡಿ ಆನಿ ಬೆಸೆಂಟರ ಸಾರ್ವಜನಿಕ ಸೇವೆಯನ್ನು ಕೊಂಡಾಡಿದರು.

ಲಾರ್ಡ್ ಹಾಲ್ಡೇನ್, ರ್‍ಯಾಮ್ಸೆ ಮ್ಯಾಕ್ಡೊನಾಲ್ಡ್, ಫಿಲಿಪ್ ಸ್ನೋಡನ್, ಜಾರ್ಜ್ ಬರ್ನಾಡ್ ಷಾ ಮುಂತಾದವರು ಆನಿಬೆಸೆಂಟರ ಜನಸೇವೆಯನ್ನುಕುರಿತು ಲೇಖನಗಳನ್ನು ಬರೆದು ಅದನ್ನು ಆ ಸಮಾರಂಭದ ಅಂಗವಾಗಿ ಗ್ರಂಥ ರೂಪದಲ್ಲಿ ಪ್ರಕಟಿಸಿದರು. ಆಕೆ ಸಮಾಜವಾದಿಯಾಗಿ, ರಾಜಕೀಯ ಚಳವಳಿ ಕಾರಳಾಗಿ, ಸುಧಾರಕಳಾಗಿ, ವಿದ್ಯಾಭ್ಯಾಸ ಪ್ರಬೋಧಕಳಾಗಿ, ಧಾರ್ಮಿಕ ನಾಯಕಳಾಗಿ ಜನತೆಗೆ ನೀಡಿದ ಸೇವೆಯನ್ನು ಆ ಲೇಖನಗಳಲ್ಲಿ ವಿವರಿಸಿದರು.

ಆ ಸಭೆಯಲ್ಲಿ ಸ್ಪಷ್ಟವಾದ ಒಂದಂಶವೆಂದರೆ, ವಿವಿಧ ವಿಚಾರಗಳಲ್ಲಿ ಆನಿ ಬೆಸೆಂಟ್‌ರವರ ಅಭಿಪ್ರಾಯಗಳನ್ನು ಪೂರ್ಣವಾಗಿ ಒಪ್ಪಿದವರು, ಒಪ್ಪ ದಿದ್ದವರು ಎಲ್ಲರಿಗೂ ಅವರ ಆತ್ಮಾರ್ಪಣ ಮನೋವೃತ್ತಿ, ನೋವು ದಬ್ಬಾಳಿಕೆ ಗೊಳಗಾದವರ ವಿಚಾರವಾಗಿ ಅವರ ಮರುಕ, ಅನ್ಯಾಯವನ್ನೆದಿರಿಸಿ ಹೋರಾ ಡುವ ಅವರ ನ್ಯಾಯಪ್ರಿಯತೆ ಇವುಗಳಿಂದ ಉಜ್ವಲವಾಗಿದ್ದ ಅವರ ಸಾರ್ವ ಜನಿಕ ಸೇವಾಜೀವನ ಮೆಚ್ಚಿಕೆಯಾಯಿತು-ಎಂಬುದು. ಇದು ಅಸಾಮಾನ್ಯ ವ್ಯಕ್ತಿಯೊಬ್ಬರಿಗೆ ದೊರೆತ ಅಸಾಮಾನ್ಯವಾದ ಹೊಗಳಿಕೆ; ವಿಶಿಷ್ಟ ಸಾಧನ ಗಳನ್ನು ಕೈಗೂಡಿಸಿಕೊಂಡಿದ್ದ ಅಸಾಮಾನ್ಯ ಸ್ತ್ರೀಯೊಬ್ಬರಿಗೆ ದೊರೆತ ವಿಶಿಷ್ಟ ಹೊಗಳಿಕೆ. ಗಂಡಿಗಾಗಲೀ, ಹೆಣ್ಣಿಗಾಗಲೀ ಇಂಥ ಹೊಗಳಿಕೆ ದೊರೆಯು ವುದು ಅಪೂರ್ವ. ಈ ಅಪೂರ್ವ ಅಭಿನಂದನೆಗೆ ಪಾತ್ರವಾದ ವ್ಯಕ್ತಿ ಮಹದ್ವ್ಯಕ್ತಿಯೆನ್ನಲಡ್ಡಿಯಿಲ್ಲ.

ಆನಿ ಬೆಸೆಂಟರು ಬಹು ದೀರ್ಘಕಾಲ ಸಂತತವಾಗಿ ಸಾರ್ವಜನಿಕ ಜೀವನ ದಲ್ಲಿದ್ದುದರಿಂದ ಅವರ ಜೀವನದ ಆ ಮುಖಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆತು ಅವರ ವ್ಯಕ್ತಿ ಜೀವನ ಹಿಂಬದಿಗೆ ಬಿದ್ದುಹೋಗಿದೆಯಾದರೂ, ಅದು ಅತ್ಯಂತ ರಮಣೀಯವಾದುದೆಂಬುದನ್ನು ನಾವು ಮರೆಯುವಂತಿಲ್ಲ. ಅಷ್ಟುಮಾತ್ರವಲ್ಲ ಅವರ ವ್ಯಕ್ತಿ ಜೀವನದಲ್ಲಿ ತೋರಿಬರುತ್ತಿದ್ದ ಶ್ರದ್ಧೆ, ಶಿಸ್ತು, ಪ್ರೇಮ ನಡವಳಿಕೆ ಗಳು ಅಪೂರ್ವವಾದುವು. ಅವರ ಅಪಾರ ಪ್ರೇಮದಿಂದ ಅರಳಿದ್ದ ಅನುಕಂಪ,

ಕ್ಷಮಾಗುಣಗಳು ಅವರ ವ್ಯಕ್ತಿ ಜೀವನದ ವೈಶಿಷ್ಟ್ಯ.

ಆನಿ ಬೆಸೆಂಟರು, ಮೊದಲು ಕ್ರಿಸ್ತಭಕ್ತೆಯಾಗಿದ್ದು, ಅನಂತರ ನಿರೀಶ್ವರ ವಾದಿಯಾಗಿ, ಆಮೇಲೆ ಬ್ರಹ್ಮಜ್ಞಾನವಾದಿಯಾಗಿ, ಈಶ್ವರನಲ್ಲಿ ಪರಮ ಭಕ್ತಿಯನ್ನೂ ಶ್ರದ್ಧೆಯನ್ನೂ ಬೆಳೆಸಿಕೊಂಡರು. ಅವರ ಆಧ್ಯಾತ್ಮಿಕ ಜೀವನದ ಈ ಒಂದೊಂದು ಹಂತದಲ್ಲೂ ಅವರು ತಾವು ನಂಬಿದ್ದ ಭಾವನೆಯ ವಿಚಾರ ವಾಗಿ ಅವರ ಶ್ರದ್ಧೆ ಪೂರ್ಣವಾಗಿತ್ತು. ಒಂದು ಭಾವನೆಯ ವಿಚಾರವಾಗಿ ಅವರ ಮನಸ್ಸಿನಲ್ಲಿ ಸಂದೇಹಗಳು ಹುಟ್ಟಿದಾಗ ಕೂಡ, ಆ ಸಂದೇಹ ನಿವೃತ್ತಿ ಯಾಗುವವರೆಗೆ ಅಥವಾ ಬೇರೆ ನಂಬಿಕೆಯನ್ನು ರೂಢಿಸಿಕೊಳ್ಳುವವರೆಗೆ, ಅವರು ತಮ್ಮ ಮೊದಲ ಭಾವನೆಗಳ ಬಗ್ಗೆ ಶ್ರದ್ಧೆಯನ್ನು ಬಿಡುತ್ತಿರಲಿಲ್ಲ. ಅವರ ಈ ಅಪ್ರತಿಮ ಶ್ರದ್ಧೆಯನ್ನು ಎತ್ತಿ ತೋರಿಸಲು ಹಲವಾರು ಉದಾಹರಣೆಗಳನ್ನು ಕೊಡಬಹುದು; ಆದರೆ ಇದೊಂದು ಸಾಕು.

ಆನಿ ಬೆಸೆಂಟರು ಬ್ರಹ್ಮಜ್ಞಾನ ಸಮಾಜವನ್ನು ಸೇರಿದಮೇಲೆ ಅವರಲ್ಲಿ ಈಶ್ವರನು ಶರಣಾಗತರಕ್ಷಕನೆಂಬ ನಂಬಿಕೆ ಉಂಟಾಯಿತು. ಅವರು ಈ ನಂಬಿಕೆಯ ಆಧಾರದ ಮೇಲೆ ಪ್ರಪತ್ತಿಭಾವವನ್ನು ಬೆಳೆಸಿಕೊಂಡರು. ಆಸ್ತಿಕ ರಾದವರಿಗೆಲ್ಲಾ ಈಶ್ವರನಲ್ಲಿ ನಂಬಿಕೆಯಿರುತ್ತದೆ; ಆದರೆ ಈ ವಿಚಾರದಲ್ಲಿ ಆನಿ ಬೆಸೆಂಟರು ರೂಢಿಸಿಕೊಂಡಿದ್ದಷ್ಟು ಶ್ರದ್ಧೆಯುಳ್ಳವರು ಕೋಟಿ ಮಂದಿಯಲ್ಲಿ ಒಬ್ಬರು ಕೂಡ ಇರಲಾರರು.

ಏಕೆಂದರೆ ಆನಿ ಬೆಸೆಂಟರು, ಒಂದು ಅಭ್ಯಾಸವನ್ನು ಬೆಳೆಸಿಕೊಂಡಿದ್ದರು. ಪ್ರತಿವರ್ಷ ಡಿಸೆಂಬರ್ ೩೧ ನೇ ತಾರೀಖಿನ ದಿವಸ ತಮ್ಮ ಬ್ಯಾಂಕ್ ಲೆಕ್ಕ ವನ್ನು ನೋಡಿ ಅದರಲ್ಲೆಷ್ಟು ಹಣವಿರುತ್ತದೆಯೋ ಅಷ್ಟನ್ನೂ ಧರ್ಮಕಾರ್ಯ ಗಳಿಗಾಗಿ ವಿನಿಯೋಗಿಸಿಬಿಡುತ್ತಿದ್ದರು. ಇದನ್ನು ತಿಳಿದಿದ್ದವರೊಬ್ಬರು "ಸನ್ಯಾಸಿಗಳು ಕೂಡ ಹೀಗೆ ಮುಂದಿನ ಯೋಚನೆ ಬಿಟ್ಟು ತಮ್ಮಲ್ಲಿದ್ದು ದನ್ನೆಲ್ಲಾ ಪೂರ್ಣವಾಗಿ ಕೊಟ್ಟುಬಿಡುವುದಿಲ್ಲ. ನೀವೇಕೆ ಆ ಅಭ್ಯಾಸವನ್ನಿಟ್ಟು ಕೊಂಡಿದ್ದೀರಿ" ಎಂದು ಅವರನ್ನು ಪ್ರಶ್ನಿಸಿದರು. ಅದಕ್ಕೆ ಉತ್ತರವಾಗಿ ಆನಿ ಬೆಸೆಂಟರು, "ನಮಗೆ ಮುಂದಿನ ವರ್ಷಕ್ಕೆ ಬೇಕಾಗುವ ಹಣಕ್ಕೆ ನಾವೇ ಈಗಿನಿಂದ ವ್ಯವಸ್ಥೆಮಾಡಿಕೊಳ್ಳುವದೆಂದರೆ, ಈಶ್ವರನಲ್ಲಿ ನಮ್ಮ ನಂಬಿಕೆಯನ್ನು ಕಳೆದುಕೊಂಡಂತೆ" ಎಂದರು.

ಆನಿ ಬೆಸೆಂಟರು ಗೀತೆಯನ್ನು ಇಂಗ್ಲಿಷ್ ಭಾಷೆಗೆ ಅನುವಾದ ಮಾಡಿದುದು ಮಾತ್ರವಲ್ಲ, ಅದರ ಸಂದೇಶವನ್ನು ತಮ್ಮ ಜೀವನಕ್ಕೆ ಅನ್ವಯಿಸಿಕೊಂಡು ಆಚರಣೆಯಲ್ಲಿಟ್ಟುಕೊಂಡಿದ್ದರು. "ಯಾವಾಗಲೂ ನನ್ನನ್ನೇ ಕುರಿತು ಚಿಂತನೆ ಮಾಡುತ್ತಿರುವವರ ಯೋಗಕ್ಷೇಮ ನನ್ನ ಹೊಣೆ" ಎಂಬ ಗೀತಾವಾಕ್ಯವನ್ನು ಅವರು ಸಂಪೂರ್ಣವಾಗಿ ಸ್ವಲ್ಪವೂ ಸಂದೇಹಕ್ಕೆ ಎಡೆಯಿಲ್ಲದಂತೆ ಪೂರ್ಣಶ್ರದ್ಧೆಯಿಂದ ನಂಬಿದ್ದರೆಂಬುದರಲ್ಲಿ ಸಂದೇಹವಿಲ್ಲ. ಅವರ ಈ ದೈವಭಕ್ತಿ ಅಸದೃಶವಾದದ್ದು. ಅದೇ ಅವರ ರಕ್ಷಾಮಣಿಯಾಗಿತ್ತೆನ್ನಬಹುದು.

ಹೀಗೆ ಅವರು ತನ್ನದೆಂಬ ಅಭಿಮಾನದಿಂದ ಬಂಧಿತರಾಗದೆ ದೀರ್ಘಕಾಲ ತ್ಯಾಗಜೀವನವನ್ನು ನಡೆಸಿದರು. ಯಾರೇ ಆಗಲಿ, ಅವರ ಸಹಾಯವನ್ನು ಬೇಡಿ ಬರಿಗೈ ಆಗಿ ಬಂದುದಿಲ್ಲ. ಅವರ ಈ ದಾನಶೀಲತೆಯನ್ನು ದುರುಪಯೋಗಪಡಿಸಿಕೊಂಡವರು ಎಷ್ಟೋಮಂದಿ. ಅದು ಅವರಿಗೆ ತಿಳಿದು ಬಂದ ಮೇಲೆ ಕೂಡ, ಅವರ ಅನುಯಾಯಿಗಳು "ಹೀಗೆ ಬಂದು ಕೇಳಿದವರಿಗೆಲ್ಲಾ ಧನಸಹಾಯ ಮಾಡಬೇಡಿ" ಎಂದು ಒತ್ತಾಯ ಮಾಡಿದ ಮೇಲೆ ಕೂಡ ಆನಿ ಬೆಸೆಂಟರ ದಾನಶೀಲತೆ ಕುಗ್ಗಲಿಲ್ಲ. ತಮ್ಮ ಸಂಪಾದನೆಯನ್ನು ವೆಚ್ಚಮಾಡುವುದರಲ್ಲಿ ಅವರು ಈ ರೀತಿ 'ಅತಿಧಾರಾಳಿ'ಯಾಗಿದ್ದರೂ, ತಮ್ಮ ವಶಕ್ಕೆ ಬಂದ ಸಾರ್ವಜನಿಕ ಹಣವನ್ನು ವೆಚ್ಚಮಾಡುವಾಗ, ಕಾಸು ಕಾಸಿಗೂ ಲೆಕ್ಕ ನೋಡುತ್ತಿದ್ದರು !

ಹಣದ ಲೆಕ್ಕವಿಡುವ ವಿಚಾರದಲ್ಲಿ ಮಾತ್ರವಲ್ಲ–ತಮ್ಮ ಎಲ್ಲಾ ಕೆಲಸ ಕಾರ್ಯಗಳಲ್ಲಿಯೂ ಅವರು ಒಳ್ಳೆ ಶಿಸ್ತಿನಿಂದ, ಕ್ರಮಬದ್ಧವಾಗಿ ನಡೆಯುತ್ತಿದ್ದರು. ಇಷ್ಟು ಹೊತ್ತಿನಲ್ಲಿ ಇಂಥೆಡೆಗೆ ಬರುತ್ತೇನೆಂದರೆ, ಅಲ್ಲಿಗೆ ಆ ಹೊತ್ತಿಗೆ ಸರಿಯಾಗಿ ಬರುತ್ತಿದ್ದರು. ಅವರು ಒಪ್ಪಿಕೊಂಡಮೇಲೆ ಎಲ್ಲಿಗೂ ಹೊತ್ತು ಮೀರಿ ಬಂದಿದ್ದೇ ಇಲ್ಲ. ಅವರು ಎಲ್ಲಿಗಾದರೂ ಹೋಗಬೇಕಾದರೆ ತಾವು ಇದ್ದ ಸ್ಥಳದಿಂದ ಅಲ್ಲಿಗೆ ನಡೆದುಕೊಂಡು ಹೋಗಲು ಎಷ್ಟು ಹೊತ್ತು ಬೇಕಾಗುತ್ತದೆಂಬುದನ್ನು ಮೊದಲು ನಿರ್ಣಯಿಸಿಕೊಳ್ಳುತ್ತಿದ್ದರು. ಅವರನ್ನು ಕರೆದುಕೊಂಡು ಹೋಗುವ ಗಾಡಿಯಾಗಲೀ ಮೋಟಾರಾಗಲೀ ಅಷ್ಟು ಹೊತ್ತಿಗೆ ಸರಿಯಾಗಿ ಅವರ ಮನೆ ಬಾಗಿಲಿನಲ್ಲಿ ಸಿದ್ಧವಾಗಿರಬೇಕು. ಇಲ್ಲದಿದ್ದರೆ, ನಡೆದುಕೊಂಡೇ ಹೊರಟುಬಿಡುತ್ತಿದ್ದರು. ಮಳೆಯಾಗಲೀ ಬಿಸಿಲಾ

ಗಲಿ ಅವರನ್ನು ತಡೆದು ನಿಲ್ಲಿಸುವಂತಿರಲಿಲ್ಲ! ವಾಹನಕ್ಕಾಗಿ ಕಾದು ಕುಳಿತು ಅದು ಹೊತ್ತಿಗೆ ಸರಿಯಾಗಿ ಬರದೆ ಹೋಗಿ, ಆ ಅನಾನುಕೂಲದಿಂದಾಗಿ ಹೋಗಬೇಕಾದೆಡೆಗೆ ಹೊತ್ತಾಗಿ ಹೋಗುವುದು ಆನಿ ಬೆಸೆಂಟರಿಗೆ ಸರಿಬೀಳು ತ್ತಿರಲಿಲ್ಲ. ಆದ್ದರಿಂದ ವಾಹನವಿಲ್ಲದಿದ್ದರೆ, ಹೊತ್ತಿಗೆ ಮುಂಚೆ ನಡೆದೇ ಹೊರಟುಬಿಡುತ್ತಿದ್ದರು.

ಊಟತಿಂಡಿಗಳ ವಿಚಾರದಲ್ಲೂ ಅಷ್ಟೇಯೆ. ತಮಗೆ ಎಷ್ಟೇ ಕೆಲಸ ವಿರಲಿ, ಎಲ್ಲೇ ಇರಲಿ, ನಿಶ್ಚಿತವಾದ ಹೊತ್ತಿಗೆ ಸರಿಯಾಗಿ ತಮ್ಮ ಕೆಲಸವನ್ನು ನಿಲ್ಲಿಸಿ ಊಟ ತಿಂಡಿಗಳಿಗೆ ಬಂದು ಕೂರುತ್ತಿದ್ದರು. ಅವುಗಳಿಗೆ ನಿಯಮಿತ ವಾಗಿದ್ದ ಕಾಲದಲ್ಲಿ ಅವನ್ನು ಮುಗಿಸಿ, ಮತ್ತೆ ತಮ್ಮ ಕೆಲಸಕ್ಕೆ ಹಿಂದಿರುಗು ತ್ತಿದ್ದರು.

ಅವರು ತಮ್ಮ ಕಾಲ ಇತರರ ಕಾಲ ಇವೆರಡನ್ನೂ ಅಮೌಲ್ಯವಾಗಿ ಗಣಿಸುತ್ತಿದ್ದರು. ವ್ಯರ್ಥಕಾಲಕ್ಷೇಪ ಅವರಿಗೆ ಸರಿಬೀಳುತ್ತಿರಲಿಲ್ಲ. ಪ್ರಯಾಣ ಕಾಲದಲ್ಲಿ ಕೂಡ ಅವರು ಓದುವುದು ಬರೆಯುವುದು ಮುಂತಾದ ಕೆಲಸ ಗಳನ್ನು ಮಾಡುತ್ತಿದ್ದರು.

ಆನಿ ಬೆಸೆಂಟರ ವಿಚಾರವಾಗಿ, ಅನೇಕರನ್ನು ಬೆರಗುಗೊಳಿಸಿರುವ ಒಂದು ವಿಚಾರವೆಂದರೆ, ಅವರು ತಮಗೆ ಬಂದ ಪತ್ರಗಳಿಗೆಲ್ಲಾ ತಪ್ಪದೆ ಉತ್ತರ ಕೊಡುತ್ತಿದ್ದುದ್ದು. ಅವರಿಗೆ ದಿನಂಪ್ರತಿ, ಜಗತ್ತಿನ ವಿವಿಧ ಭಾಗಗಳಿಂದ ನೂರಾರು ಕಾಗದಗಳು ಬರುತ್ತಿದ್ದವು. ತಮಗೆ ಹಲವಾರು ಮುಖ್ಯ ಕಾರ್ಯ ಗಳಿರುತ್ತಿದ್ದುವಾದರೂ ಅವುಗಳ ನಡುವೆ ಬಿಡುವುಮಾಡಿಕೊಂಡು ತಾವೇ ಈ ಕಾಗದಗಳಿಗೆಲ್ಲಾ ಉತ್ತರ ಬರೆಯುತ್ತಿದ್ದರು. ಯಾರ ಕಾಗದಕ್ಕೂ ಉತ್ತರ ಕೊಡದೆ ಇರುತ್ತಿರಲಿಲ್ಲ.

ತಮ್ಮ ಈ ಪತ್ರಲೇಖನ, ಪ್ರವಾಸ, ಪತ್ರಿಕೋದ್ಯಮ, ಭಾಷಣ, ಆಡಳಿತದ ಜವಾಬ್ದಾರಿಗಳ ನಡುವೆ ಅವರು ಗ್ರಂಥರಚನೆ ಮಾಡುತ್ತಿದ್ದ ರೆಂಬುದು ಅನೇಕರಿಗೆ ಆಶ್ಚರ್ಯವನ್ನುಂಟುಮಾಡೀತು! ಅವರು ಬರೆದಿರುವ ಗ್ರಂಥ ಗಳು ಒಂದೇ ಎರಡೇ-ಮುನ್ನೂರ ಅರವತ್ತೆರಡು ! ಇವಲ್ಲದೆ ಅವರು ತಮ್ಮ ಸಹೋದ್ಯೋಗಿಯಾಗಿದ್ದ ಲೆಡ್ ಬೀಟರ್ ಮುಂತಾದವರೊಡನೆ ಸೇರಿ ಇಪ್ಪತ್ತಾರು ಗ್ರಂಥಗಳನ್ನು ಬರೆದಿದ್ದಾರೆ !

ಅವರಿಗೆ ಇಷ್ಟು ಕಾರ್ಯಶಕ್ತಿ ಹೇಗೆ ಲಭಿಸಿತೆಂಬುದೇ ದೊಡ್ಡ ಸಮಸ್ಯೆ. ವ್ಯರ್ಥವಾಗಿ ಕಾಲಹರಣ ಮಾಡದೆ, ಕೆಲಸ ಮಾಡುತ್ತಲೇ ಇದ್ದ ಅವರ ಉದ್ಯಮಶೀಲತೆ, ಮತ್ತು ಅಪರಿಮಿತವಾದ ಕಾರ್ಯಶ್ರದ್ಧೆಗಳೇ ಅವರಿಗೆ ಈ ವಿಶೇಷ ಶಕ್ತಿಯನ್ನು ಕೊಟ್ಟುವೆನ್ನಬಹುದು. ಆದರೆ ಆನಿ ಬೆಸೆಂಟ್‌ರವರು ಮಾತ್ರ-ತಮಗೆ ಈ ಕಾರ್ಯಶಕ್ತಿ ದೊರೆತುದು, ತಮ್ಮ ಜೀವನವನ್ನು ನಿರ್ದೇಶಿಸುತ್ತಿದ್ದ ಗುರುವಿನ ಕೃಪಾವಿಶೇಷದಿಂದ ಎಂದು ಧೃಡವಾಗಿ ನಂಬಿದ್ದರು. ತಾವು ಆ ಗುರುವರ್ಯನ ಆಣತಿಯನ್ನು ನೆರವೇರಿಸುವ ಉಪಕರಣ ಮಾತ್ರ ಎಂದು ಭಾವಿಸಿಕೊಂಡಿದ್ದರು. ಆ ನಂಬಿಕೆ, ಆ ಭಾವನೆಗಳ ಸತ್ಯಾಂಶವನ್ನು ನಿರ್ಣಯಿಸಲು ಅವಶ್ಯಕವಾಗಿ ಬೇಕಾದ ಆಧ್ಯಾತ್ಮಿಕ ಶಕ್ತಿ ಸಾಮರ್ಥ್ಯಗಳು ನಮಗಿಲ್ಲವಾಗಿ, ಅವರ ನಂಬಿಕೆಗಳನ್ನು ನಾವು ವಿಮರ್ಶಿಸಲಾರೆವು. ಈ ವಿಚಾರ ಅದೇನೇ ಇರಲಿ, ಆನಿ ಬೆಸೆಂಟರು ತಮ್ಮ ಗುರುಗಳಲ್ಲಿಟ್ಟಿದ್ದ ಅಪರಿಮಿತ ಶ್ರದ್ಧೆ ಅವರ ಜೀವನದ ದ್ವಿತೀಯಾರ್ಧವನ್ನು ರೂಪಿಸಿದ ಮಹಾಶಕ್ತಿಯಾಯಿತೆಂಬುದು ಮಾತ್ರ ನಿಜ.

ಆನಿ ಬೆಸೆಂಟರ ಬಾಳು ತುಂಬು ಬಾಳು.

ಮನೆಯ ಆವರಣವನ್ನು ಮೀರಿ ಬಂದು ಇಡೀ ವಿಶ್ವವನ್ನು ಆವರಿಸಿದ ತುಂಬು ಬಾಳು.

ಸಂಸಾರ ಬಂಧನವನ್ನು ಕಳಚಿಕೊಂಡು ಬಂದ ಆಕೆ, ತಾನಾಗಿ ಲೋಕ ಸೇವೆಯ ಸಂಕೋಲೆ ತೊಟ್ಟು ಜನಸೇವೆ ಮಾಡಿದರು; ಈ ಸೇವಾದೀಕ್ಷೆಯನ್ನು ವಹಿಸಿದ್ದಾಗ, ತಮ್ಮನ್ನಾವರಿಸಿದ ದುರಾರೋಪ, ನಿಂದೆ, ಟೀಕೆಗಳಿಂದ ಅಪ್ರತಿಭರಾಗಿ, ಕರ್ತವ್ಯ ವಿಮುಖರಾಗದೆ, ಸೇವೆ, ಸತ್ಯಾನ್ವೇಷಣೆಯ ನಿಶ್ಚಿತ ಮಾರ್ಗದಲ್ಲಿ ಮುಂದುವರೆದರು. ತಮ್ಮ ಸ್ಥೈರ್ಯದಿಂದ, ತಮ್ಮ ಸೌಜನ್ಯದಿಂದ ತಮ್ಮ ವಿರೋಧಿಗಳನ್ನು ಗೆದ್ದರು.

ತಮ್ಮ ಅನುಕಂಪ, ಸ್ನಿಗ್ಧ ಪ್ರೇಮಗಳಿಂದ ಲಕ್ಷಾನುಲಕ್ಷ ಸ್ತ್ರೀಪುರುಷರಿಗೆ ಮಾರ್ಗದರ್ಶಿಯಾಗಿ, "ತಾಯಿ"ಯಾಗಿ, ಬಾಳಿನ ಬೇಗೆಯಿಂದ ಕರಕಾಗುತ್ತಿದ್ದ ಅವರ ಚೈತನ್ಯ ಕೊನರಿ ಕಂಗೊಳಿಸುವಂತೆ ಮಾಡಿದರು.

ತಮಗೆ ಪ್ರಿಯವಾಗಿದ್ದ ಈ ಶುಭಕಾರ್ಯ ನಿರಂತರವಾಗಿ ಮುಂದುವರಿದು ಜಗತ್ತಿಗೆ ಮಂಗಳವನ್ನುಂಟುಮಾಡಲೆಂದು ಬಯಸಿ, ಅದಕ್ಕಾಗಿ ನೂರಾರು

ಮಂದಿ ಕಾರ್ಯಕರ್ತರನ್ನು ಸಿದ್ಧಗೊಳಿಸಿದರು.

ಮಾನವಜೀವಿ, ತನ್ನ ಬಾಳಿನ ಅವಧಿಯಲ್ಲಿ ಮಾನವವರ್ಗಕ್ಕೆ ಎಷ್ಟು ಸೇವೆ ಸಲ್ಲಿಸಬಹುದೋ ಅಷ್ಟನ್ನೂ ನಿಸ್ಪೃಹತೆಯಿಂದ ಸಲ್ಲಿಸಿ, ಇಲ್ಲಿಂದ ಜಾರಿ ಕಣ್ಮರೆಯಾದರು.

೧೮೪೭ ನೇ ಅಕ್ಟೋಬರ್ ೧ ನೇ ತಾರೀಖು ಲಂಡನ್ನಿನಲ್ಲಿ ಕಣ್ತೆರೆದ ಆನಿ ಬೆಸೆಂಟರು ೧೯೩೩ ನೇ ಸೆಪ್ಟೆಂಬರ್ ೨೦ ನೇ ತಾರೀಖು ಅಡ್ಯಾರಿನಲ್ಲಿ ಕಣ್ಣುಮುಚ್ಚಿದರು. ನಾವು, ಸಾವೆನ್ನುವ ಸ್ಥಿತಿಯನ್ನು ಪಡೆದರು.

"ಮಹಾತ್ಮರು ಸಾಯುವುದಿಲ್ಲ" – ಎಂಬೊಂದು ಹೇಳಿಕೆಯಿದೆ. ಈ ಮಾತು ನಿಜ. ಏಕೆಂದರೆ ಅವರ ದೇಹ ನಷ್ಟವಾದರೂ ಅವರ ನಡೆ ನುಡಿಗಳಿಂದ ಪ್ರೇಷಿತವಾದ ಭಾವ, ಭಾವನೆಗಳು ಜಗತ್ತಿನಲ್ಲೆಲ್ಲಾ ಹಬ್ಬಿ, ಹರಡಿ ಅವರನ್ನು, ಅವರ ನೆನಪನ್ನು ಅಮರವನ್ನಾಗಿ ಮಾಡುತ್ತವೆ.

ಇಂಥ ಅಮರರಲ್ಲಿ ಆನಿ ಬೆಸೆಂಟರು ಒಬ್ಬರು.

